KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಡಿಸೆಂಬರ್ ೧೮, ೨೦೦೮ (ಮಾರ್ಗಶಿರ ೨೭, ಶಕ ವರ್ಷ ೧೯೩೦) | ಸಂಚಿಕೆ ೫೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಫೊರೆನ್ಸಿಕ್ ವಿಜ್ಞಾನ ಪ್ರಯೋಗಾಲಯದಲ್ಲಿನ "Centre of Brain Science for Forensics" ರಲ್ಲಿ ವೈಜ್ಞಾನಿಕ ಅಧಿಕಾರಿ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 135 ಪಿಓಪಿ 2006, ದಿ:09–10–2006.
2) ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಫೊರೆನ್ಸಿಕ ವಿಜ್ಞಾನ ಪ್ರಯೋಗಾಲಯದ ವಿಷಯಗಳಿಗೆ ಸಂಬಂಧಿಸಿದಂತೆ ನಡೆದ ಸಭೆಯ ನಡವಳಿಗಳು – ಸಂಖ್ಯೆ:ಹೆಚ್‌ಡಿ 5 ಸಿಓಡಿ 2008, ದಿನಾಂಕ: 06–02–2008.
3) ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ: EST.50/ 215/FSL/2006–07, ದಿ:06–02–2008.
4) ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ:EST.50/ FSL/216/2006–07, ದಿ:07–02–2008.
5) ಸರ್ಕಾರದ ಪತ್ರ ಸಂಖ್ಯೆ:ಒಇ 28 ಪೊಸಿಲಿ 2008, ದಿ:27–05–2008.
6) ಸರ್ಕಾರದ ಆದೇಶ ಸಂಖ್ಯೆ:ಒಇ 10 ಪೊಸಿಲಿ 2008, ದಿ:31–05–2008.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಫೊರೆನ್ಸಿಕ್ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಇಲ್ಲಿ ಸ್ಥಾಪಿಸಲಾಗಿರುವ "Centre of Brain Science for Forensics" ರಲ್ಲಿನ ಫೊರೆನ್ಸಿಕ್ ವಿಜ್ಞಾನ ವಿಭಾಗಕ್ಕೆ 15 ಹುದ್ದೆಗಳನ್ನು ಸೃಜಿಸಲಾಗಿದ್ದು, ಇವುಗಳಲ್ಲಿ 2 ವೈಜ್ಞಾನಿಕ ಅಧಿಕಾರಿಗಳ (ಪತ್ರಾಂಕಿತ ಹುದ್ದೆಗಳು) ಹುದ್ದೆಗಳು ಸೇರಿವೆ.

ಮೇಲೆ (2) ರಲ್ಲಿ ಓದಲಾದ ಸಭೆಯ ನಡವಳಿಯಲ್ಲಿ ನಾರ್ಕೋ ಅನಾಲಿಸಿಸ್ ಪರೀಕ್ಷೆಗಳನ್ನು ಶೀಘ್ರವಾಗಿ ನಡೆಸಲು ಹಾಗೂ ಈಗ ಆಗುತ್ತಿರುವ ವಿಳಂಬವನ್ನು ತಪ್ಪಿಸಲು ತಕ್ಷಣವೇ ಅಗತ್ಯ ಕ್ರಮ ತೆಗೆದುಕೊಳ್ಳಲು ನಿರ್ದೇಶಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ 5 ವೈಜ್ಞಾನಿಕ ಅಧಿಕಾರಿ (ಟಾಕ್ಸಿಕಾಲಜಿ) ಹುದ್ದೆಗಳನ್ನು ವೈಜ್ಞಾನಿಕ ಅಧಿಕಾರಿ, ಫೊರೆನ್ಸಿಕ್ ವಿಜ್ಞಾನ ವಿಭಾಗಕ್ಕೆ ವರ್ಗಾಯಿಸಲು ಹಾಗೂ ಈ ಹುದ್ದೆಗಳನ್ನು 5 ಪ್ರಾದೇಶಿಕ ನ್ಯಾಯ ವಿಜ್ಞಾನ ಪ್ರಯೋಗಾಲಯಗಳಿಗೆ ಒಂದರಂತೆ ಕೇಂದ್ರ ಸ್ಥಾನ ನೀಡಲು ನಿರ್ದೇಶಕರು ಕೋರಿದ್ದು, ಮೇಲೆ (6) ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಕಂಡ ಕಲಂ 2 ರಲ್ಲಿರುವ ಹುದ್ದೆಗಳನ್ನು ಕಲಂ 3 ನಲ್ಲಿ ನಮೂದಿಸಿದಂತೆ ಮರು ಪದನಾಮ

(redesignate) ಮಾಡಲು ಮತ್ತು ಕಲಂ 5 ನಲ್ಲಿ ಸೂಚಿಸಿದಂತೆ ಪ್ರಾಂತೀಯ FSL ಗಳಿಗೆ ವರ್ಗಾಯಿಸಲು relocate ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

| Sl. No. | Designation of the existing post | To be Re-designated | No.of posts | To be relocated at |
|---|---|---|---|---|
| (1) | (2) | (3) | (4) | (5) |
| 1. | Scientific Officer (Toxicology) | As Scientific Officer (Forensic Psychology) | Five (4 posts available under direct recruitment and one promotional post at FSL, Bangalore) | One each at 5 Regional FSLs |
| 2. | Scientific Assistant (Toxicology) | As Scientific Assistant (Forensic Psychology) | Five (3 posts located at FSL, Bangalore and 2 posts located at FSL, Davanagere) | One each at 5 Regional FSLs. |

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿನ ಈ ಕೆಳಕಂಡ ತಾಂತ್ರಿಕ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ಹಾಗೂ ಮೀಸಲಾತಿ ನಿಯಮಗಳ ಅನ್ವಯ ಭರ್ತಿ ಮಾಡಿಕೊಳ್ಳಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ

| ಕ್ರ.ಸಂ. | ಹುದ್ದೆ | ಒಟ್ಟು ಹುದ್ದೆಗಳು | ವೇತನ ಶ್ರೇಣಿ |
|---|---|---|---|
| 1. | ವೈಜ್ಞಾನಿಕ ಸಹಾಯಕರು | 04 | 8825–16000 |
| 2. | ಇ.ಇ.ಜಿ. ಟೆಕ್ನಿಷಿಯನ್ | 02 | 7725–13350 |
| 3. | ಓ.ಟಿ. ಅಟೆಂಡರ್ | 01 | 5200–8200 |

ಬಾಕಿ ಉಳಿದಿರುವ ಪತ್ರಾಂಕಿತ ಹುದ್ದೆಗಳಾದ 2 ವೈಜ್ಞಾನಿಕ ಅಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಿಕೊಳ್ಳಲು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಈ ಕೆಳಕಂಡಂತೆ ನಿರ್ದೇಶಕರು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಹುದ್ದೆ | ವಿದ್ಯಾರ್ಹತೆ | ಒಟ್ಟು ಹುದ್ದೆಗಳು | ವೇತನ ಶ್ರೇಣಿ | ನೇಮಕಾತಿ ಅಳವಡಿಸಬೇಕಾದ ರೋಸ್ಟರ್ |
|---|---|---|---|---|---|
| 1. | ವೈಜ್ಞಾನಿಕ ಅಧಿಕಾರಿ | ಪಿ.ಹೆಚ್.ಡಿ. ಇನ್ ಸೈಕಾಲಜಿ (ಕ್ಲಿನಿಕಲ್ ಸೈಕಾಲಜಿ ವಿಷಯದಲ್ಲಿ ಸಂಶೋಧನೆ ನಡೆಸಿರಬೇಕು) ಅಥವಾ 1ನೇ ದರ್ಜೆಯಲ್ಲಿ ಎಂ.ಎ/ ಎಂ.ಎಸ್.ಸಿ. ಇನ್ ಸೈಕಾಲಜಿ ಪದವಿ ಹೊಂದಿರಬೇಕು ಮತ್ತು 3 ವರ್ಷಗಳು ಕ್ಲಿನಿಕಲ್ ಸೈಕಾಲಜಿ ವಿಷಯದ ಬಗ್ಗೆ ಸರ್ಕಾರಿ ಅಂಗೀಕೃತ ಸಂಸ್ಥೆಯಲ್ಲಿ ಸಂಶೋಧನಾ ಅನುಭವ ಅಥವಾ ಸರ್ಕಾರದ ಮಾನ್ಯತೆ ಪಡೆದಿರುವ ನ್ಯಾಯ ವಿಜ್ಞಾನ ಪ್ರಯೋಗಾಲಯಗಳಲ್ಲಿ ಕೆಲಸ ನಿರ್ವಹಿಸಿದ ಅನುಭವ ಹೊಂದಿರಬೇಕು. | 02 | 11400–21600 | 01–ಸಾಮಾನ್ಯ ಅಭ್ಯರ್ಥಿ<br>01–ಪರಿಶಿಷ್ಟ ಜಾತಿ |

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 95 ಎಸ್‌ಆರ್‌ಡಿ 97 ದಿನಾಂಕ 21–06–2001 ರನ್ವಯ ನ್ಯಾಯ ವಿಜ್ಞಾನ ಪ್ರಯೋಗಾಲಯದ ವೃಂದ ಮತ್ತು ನೇಮಕಾತಿ ನಿಯಮಗಳ ಅನ್ವಯ ವೈಜ್ಞಾನಿಕ ಅಧಿಕಾರಿ (ಫೋರೆನ್ಸಿಕ್ ಸೈಕಾಲಜಿ) ವೃಂದದ ಹುದ್ದೆಗಳು ಇರುವುದಿಲ್ಲ.

ಮೇಲೆ ವಿವರಿಸಲಾದ ಹಿನ್ನೆಲೆಯಲ್ಲಿ, ಈ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಕಾರ್ಯಕಾರಿ ಆದೇಶದ ಮೂಲಕ ನಿಗಧಿಪಡಿಸಿ ತಕ್ಷಣವೇ ನೇರ ನೇಮಕಾತಿಯಿಂದ ಭರ್ತಿ ಮಾಡುವ ಅಗತ್ಯವಿರುವುದರಿಂದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿಯನ್ನು ಬಾಕಿ ಇರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 28 ಪೊಸಿಲಿ 2008, ಬೆಂಗಳೂರು, ದಿನಾಂಕ 31ನೇ ಅಕ್ಟೋಬರ್ 2008**

ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 135 ಪಿಓಪಿ 2008 ದಿನಾಂಕ 09–10–2006 ರಲ್ಲಿ ಸ್ಥಾಪಿಸಿರುವ ನ್ಯಾಯ ವಿಜ್ಞಾನ ಪ್ರಯೋಗಾಲಯದ "Centre of Brain Science for Forensics" ರಲ್ಲಿನ ಫೊರೆನ್ಸಿಕ್ ವಿಜ್ಞಾನ ವಿಭಾಗದಲ್ಲಿನ Toxicology ಯಿಂದ Forensic Psychology ವಿಭಾಗಕ್ಕೆ ವರ್ಗ ಮಾಡಿರುವ 2 ವೈಜ್ಞಾನಿಕ ಅಧಿಕಾರಿಗಳ ಹುದ್ದೆಗಳನ್ನು ಹಾಗೂ ಮೇಲೆ (5) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 31-05–2008 ರಲ್ಲಿ ಪುನರ್ ನಾಮಕರಣ ಮಾಡಿ relocate ಮಾಡಿರುವ 4 ನೇರ ನೇಮಕಾತಿ ಹುದ್ದೆಗಳನ್ನು ಈ ಕೆಳಕಂಡ ವಿದ್ಯಾರ್ಹತೆ ಅನ್ವಯ ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಚಾಲ್ತಿಯಲ್ಲಿರುವ ನೇಮಕಾತಿ/ಮೀಸಲಾತಿ ನಿಯಮಗಳ ಅನ್ವಯ ನೇರ ನೇಮಕಾತಿಯನ್ನು ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

| ಕ್ರ. ಸಂ. | ಹುದ್ದೆ ಮತ್ತು ವೇತನ ಶ್ರೇಣಿ | ಒಟ್ಟು ಹುದ್ದೆಗಳು | | ನೇಮಕಾತಿಯ ವಿಧಾನ | ವಿದ್ಯಾರ್ಹತೆ |
|---|---|---|---|---|---|
| | | ಖಾಯಂ | ತಾತ್ಕಾಲಿಕ | | |
| 1. | ವೈಜ್ಞಾನಿಕ ಅಧಿಕಾರಿ (Forensic Psychology) ರೂ.11400–21600 | – | 06 | ನೇರ ನೇಮಕಾತಿ | 1ನೇ ದರ್ಜೆಯಲ್ಲಿ ಎಂ.ಎ /ಎಂ.ಎಸ್.ಸಿ. ಇನ್ ಸೈಕಾಲಜಿ ಪದವಿ ಹೊಂದಿರಬೇಕು ಮತ್ತು ಕ್ಲಿನಿಕಲ್ ಸೈಕಾಲಜಿ ವಿಷಯದ ಬಗ್ಗೆ ಸರ್ಕಾರಿ ಅಂಗೀಕೃತ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ 3 ವರ್ಷಗಳಿಗೆ ಕಡಿಮೆ ಇಲ್ಲದ ಅನುಭವ ಅಥವಾ ಸರ್ಕಾರದ ಮಾನ್ಯತೆ ಪಡೆದಿರುವ ಸಂಶೋಧನಾ ಸಂಸ್ಥೆಯಲ್ಲಿ 3 ವರ್ಷಗಳಿಗೆ ಕಡಿಮೆ ಇಲ್ಲದ ಸಂಶೋಧನಾ ಅನುಭವ ಹೊಂದಿರಬೇಕು. |

ಮೇಲೆ ಸೂಚಿಸಿರುವ ನೇಮಕಾತಿ ಈ ಕೆಳಗೆ ನಮೂದಿಸಿರುವ ಷರತ್ತುಗಳಿಗೆ ಒಳಪಟ್ಟಿದೆ.

1) ಕಾರ್ಯಕಾರಿ ಆದೇಶದ ಮೂಲಕ ನಿಗಧಿಪಡಿಸಿದ ನೇಮಕಾತಿ ವಿಧಾನವು ಕಾರ್ಯಕಾರಿ ಆದೇಶ ಹೊರಡಿಸಿದ ದಿನಾಂಕದಿಂದ 6 ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2) ಈ ನೇಮಕಾತಿ ವಿಧಾನವನ್ನು ವಿಧಿ ವಿಜ್ಞಾನ ಪ್ರಯೋಗಾಲಯದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲು ಸರ್ಕಾರಕ್ಕೆ ಕೂಡಲೇ ಪ್ರಸ್ತಾವನೆ ಸಲ್ಲಿಸುವುದು.
3) 6 ತಿಂಗಳ ಒಳಗಾಗಿ ಈ ನೇಮಕಾತಿ ವಿಧಾನವನ್ನು ವಿಧಿ ವಿಜ್ಞಾನ ಪ್ರಯೋಗಾಲಯದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಆಇ 387 ವೆಚ್ಚ–6 2008, ದಿನಾಂಕ 17–05–2008 ಮತ್ತು ಸಿ.ಆ.ಸು.ಇಲಾಖೆಯು (ಸೇವಾ ನಿಯಮಗಳು) ಸಿಆಸುಇ 83 ಸೇನಿಡಿ 2008 ದಿನಾಂಕ 27–09–2008 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1608

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಕೆ. ಮೋಪೂರ್ ರೆಡ್ಡಿ, ಎಸ್.ಪಿ. ಮತ್ತು ಶ್ರೀ. ಎಂ.ಎ. ಸೌದಾಗರ್, ಎಸ್.ಪಿ. ರವರುಗಳ ವೇತನವನ್ನು ಶ್ರೀ. ಹೆಚ್.ಎಂ. ಗಂಗಾಧರಯ್ಯ, ಡಿವೈ.ಎಸ್.ಪಿ. ರವರ ವೇತನಕ್ಕೆ ಸರಿದೂಗಿಸುವ ಕುರಿತು..

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಕಛೇರಿಯ ಪತ್ರ ಸಂಖ್ಯೆ: 10/ಸಿಬ್ಬಂದಿ/ವೇ.ನಿ/07–08, ದಿನಾಂಕ 29–02–2008.

**ಪ್ರಸ್ತಾವನೆ:**

ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಶ್ರೀ. ಕೆ. ಮೋಪೂರ್ ರೆಡ್ಡಿ, ಹಾಲಿ ಎಸ್.ಪಿ. ಮತ್ತು ಶ್ರೀ. ಎಂ.ಎ. ಸೌದಾಗರ್, ಹಾಲಿ ಎಸ್.ಪಿ. ರವರುಗಳು ಮನವಿ ಸಲ್ಲಿಸಿ ಶ್ರೀ. ಹೆಚ್.ಎಂ. ಗಂಗಾಧರಯ್ಯ, ಡಿವೈ.ಎಸ್.ಪಿ. ರವರಿಗಿಂತ ಅವರುಗಳು ಸೇವೆಯಲ್ಲಿ ಹಿರಿಯರಾಗಿದ್ದು, ಶ್ರೀ.ಹೆಚ್.ಎಂ.ಗಂಗಾಧರಯ್ಯ ರವರು ಹೆಚ್ಚಿನ

ವೇತನವನ್ನು ಪಡೆಯುತ್ತಿದ್ದಾರೆ, ಆದುದರಿಂದ ಅವರ ವೇತನಕ್ಕೆ ಸರಿದೂಗಿಸುವಂತೆ ಸಲ್ಲಿಸಿದ ಮನವಿಯನ್ನು ಲಗತ್ತಿಸುತ್ತಾ, ಶ್ರೀ ಮೋಪೂರ್ ರೆಡ್ಡಿ, ಶ್ರೀ ಎಂ.ಎ. ಸೌಧಾಗರ್ ರವರು ನೇರ ನೇಮಕಾತಿ ಪಿಎಸ್‌ಐ ಗಳಾಗಿ ನೇಮಕಾತಿ ಹೊಂದಿದ್ದು ಪ್ರಸ್ತುತ ಜಾರಿಯಲ್ಲಿರುವ ಪಿಎಸ್‌ಐಗಳ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂ. 1671 ಮತ್ತು 1624 ರಲ್ಲಿರುವ ಶ್ರೀ ಮೋಪೂರ್ ರೆಡ್ಡಿ, ಶ್ರೀ ಎಂ.ಎ.ಸೌಧಾಗರ್ ರವರುಗಳು ಕ್ರಮ ಸಂ. 2075 ರಲ್ಲಿರುವ ಶ್ರೀ. ಹೆಚ್.ಎಂ. ಗಂಗಾಧರಯ್ಯರವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿರುತ್ತಾರೆ. ಕಿರಿಯ ಅಧಿಕಾರಿ ಶ್ರೀ. ಹೆಚ್.ಎಂ. ಗಂಗಾಧರಯ್ಯ ಡಿವೈಎಸ್‌ಪಿ ರವರು ದಿನಾಂಕ: 5–11–1977 ರಂದು ಪಿ.ಎಸ್.ಐ ಆಗಿ ನೇಮಕಾತಿ ಹೊಂದಿದ್ದು, ಕಾಲಕಾಲಕ್ಕೆ ಪಡೆಯುತ್ತಿರುವ ವೇತನ ವಿವರಗಳನ್ನು ಪರಿಶೀಲಿಸಲಾಗಿ ಸದರಿಯವರು ದಿ: 01–11–1998ಕ್ಕೆ ಮೊದಲನೆ ಸ್ಥಗಿತ ವೇತನ ಬಡ್ತಿ ಪಡೆದಿದ್ದು, ತದನಂತರ 1999 ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ದಿನಾಂಕ:1–11–2001ಕ್ಕೆ ಎರಡನೆ ಸ್ಥಗಿತ ವೇತನ ಬಡ್ತಿ, ದಿನಾಂಕ:1–11–2002ಕ್ಕೆ ಮೂರನೆ ಸ್ಥಗಿತ ವೇತನ ಬಡ್ತಿ, ದಿನಾಂಕ:1–11–2003ಕ್ಕೆ ನಾಲ್ಕನೆ ಸ್ಥಗಿತ ವೇತನ ಬಡ್ತಿ ಹಾಗೂ ದಿನಾಂಕ:1–11–2004ಕ್ಕೆ ಐದನೇ ಸ್ಥಗಿತ ವೇತನ ಬಡ್ತಿ ಪಡೆದು ರೂ.10620+260+260+260+260 ವೇತನ ಪಡೆಯುತ್ತಿದ್ದಾರೆ. ಅದೇ ರೀತಿ ಹಿರಿಯ ಅಧಿಕಾರಿಗಳಾದ ಶ್ರೀ.ಮೋಪೂರ್ ರೆಡ್ಡಿ, ಶ್ರೀ ಎಂ.ಎ. ಸೌಧಾಗರ್ ರವರುಗಳು ದಿನಾಂಕ:20–10–1975ರಲ್ಲಿ ಪಿಎಸ್‌ಐ ಗಳಾಗಿ ನೇಮಕ ಹೊಂದಿದ್ದು, ದಿ: 01–01–1997ಕ್ಕೆ ಮೊದಲನೆ ಸ್ಥಗಿತ ವೇತನ ಬಡ್ತಿಯನ್ನು ಹಾಗೂ ದಿನಾಂಕ;01–01–1998ಕ್ಕೆ ಎರಡನೆ ಸ್ಥಗಿತ ವೇತನ ಬಡ್ತಿಯನ್ನು ಪಡೆದು ತದನಂತರ 1999ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ದಿನಾಂಕ:01–04–2001 ಕ್ಕೆ ಮೂರನೆ ಸ್ಥಗಿತ ವೇತನ ಬಡ್ತಿ, ದಿನಾಂಕ:1–04–2002ಕ್ಕೆ ನಾಲ್ಕನೆ ಸ್ಥಗಿತ ವೇತನ ಬಡ್ತಿ ಹಾಗೂ ದಿನಾಂಕ:1–04–2003ಕ್ಕೆ ಐದನೆ ಸ್ಥಗಿತ ವೇತನ ಬಡ್ತಿ ಪಡೆದು ರೂ.10620+260+260+260ಗಳ ವೇತನ ಪಡಿಯುತ್ತಿದ್ದು ತದನಂತರ ಯಾವುದೇ ಬಡ್ತಿಗಳಿಲ್ಲದೆ ಕಿರಿಯ ಅಧಿಕಾರಿ ಶ್ರೀ. ಹೆಚ್.ಎಂ. ಗಂಗಾಧರಯ್ಯ ರವರಿಗಿಂತ ಕಡಿಮೆ ವೇತನ ಪಡೆಯಲು ಕಾರಣವಾಗಿರುತ್ತದೆ. ಆದುದರಿಂದ ಸದರಿ ವೇತನ ತಾರತಮ್ಯವನ್ನು ನಿವಾರಿಸಿ, ಶ್ರೀ ಮೋಪೂರ್ ರೆಡ್ಡಿ, ಶ್ರೀ ಎಂ.ಎ. ಸೌಧಾಗರ್ ರವರುಗಳ ವೇತನವನ್ನು ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾದ ಶ್ರೀ. ಹೆಚ್.ಎಂ. ಗಂಗಾಧರಯ್ಯ, ಡಿವೈ.ಎಸ್.ಪಿ. ರವರ ವೇತನಕ್ಕೆ ಸರಿದೂಗಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 112 ಪೊಸಿಪ 2008, ಬೆಂಗಳೂರು, ದಿನಾಂಕ 21ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಿರಿಯ ಅಧಿಕಾರಿಗಳಾದ ಶ್ರೀ. ಕೆ. ಮೋಪೂರ್ ರೆಡ್ಡಿ, ಎಸ್.ಪಿ. ಮತ್ತು ಶ್ರೀ. ಎಂ.ಎ. ಸೌದಾಗರ್, ಎಸ್.ಪಿ. ರವರುಗಳ ವೇತನವನ್ನು ದಿನಾಂಕ 01–11–2004 ರಿಂದ ಜಾರಿಗೆ ಬರುವಂತೆ ರೂ. 10620+260+260+260 ರಿಂದ ರೂ. 10620+260+260+260+260ಗೆ ಕಿರಿಯ ಅಧಿಕಾರಿಯಾದ ಶ್ರೀ. ಹೆಚ್.ಎಂ. ಗಂಗಾಧರಯ್ಯ, ಡಿವೈ.ಎಸ್.ಪಿ. ರವರ ವೇತನಕ್ಕೆ ಸರಿದೂಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1485

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎ.ಕೆ. ನಾಗಪ್ಪ, ಸಹಾಯಕ ಕಮಾಂಡೆಂಟ್ ಇವರ ಜೇಷ್ಠತೆಯನ್ನು ಸಹಾಯಕ ಕಮಾಂಡೆಂಟ್ ಹುದ್ದೆಯಲ್ಲಿ ಪುನರ್ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:**
1) ಎ.ಡಿ.ಜಿ.ಪಿ. ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: 6/ಡಿಇ/95–96 ದಿನಾಂಕ 30–01–1997 – ಓ.ಬಿ. ಸಂಖ್ಯೆ: 349/96–97.
2) ಡಿಜಿ ಮತ್ತು ಐಜಿಪಿ ರವರ ಆದೇಶ ಸಂಖ್ಯೆ: ಸಿಬಿ(5)/135/ 96–97 ದಿನಾಂಕ 30–08–97.

**ಪ್ರಸ್ತಾವನೆ:**

ಶ್ರೀ. ಎ.ಕೆ. ನಾಗಪ್ಪ, ಹಿಂದಿನ ಸ್ಪೆಷಲ್ ಆರ್.ಪಿ.ಐ. 6ನೇ ಪಡೆ, ಗುಲ್ಬರ್ಗಾ ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಇವರ ವಿರುದ್ಧದ 7 ಆಪಾದನೆಗಳಲ್ಲಿ 3 ಆಪಾದನೆಗಳು ಸಂಪೂರ್ಣವಾಗಿ ಸಾಬೀತಾಗಿದೆಯೆಂದು ಮತ್ತು ಒಂದು ಆಪಾದನೆ ಭಾಗಶ: ಸಾಬೀತಾಗಿರುತ್ತದೆಂದು ನಿರ್ಣಯಿಸಿ ಮೇಲೆ 1 ರಲ್ಲಿ ಓದಲಾದ ಆದೇಶದಲ್ಲಿ ಶ್ರೀ. ಎ.ಕೆ. ನಾಗಪ್ಪ, ಸ್ಪೆಷಲ್ ಆರ್.ಪಿ.ಐ. 6ನೇ ಪಡೆ ಕೆ.ಎಸ್.ಆರ್.ಪಿ. ಗುಲ್ಬರ್ಗಾ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸಲಾಗಿರುತ್ತದೆ.

ಮೇಲೆ 2 ರಲ್ಲಿ ಓದಲಾದ ಡಿಜಿ ಮತ್ತು ಐಜಿಪಿ ರವರ ಆದೇಶದಲ್ಲಿ ಶ್ರೀ. ಎ.ಕೆ. ನಾಗಪ್ಪ ರವರು ಸಲ್ಲಿಸಿದ ಮೇಲ್ಮನವಿಯನ್ನು ಪರಿಗಣಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಇವರ ವೇತನವನ್ನು ಅವರ ಹುದ್ದೆಯ ಕನಿಷ್ಠ ಮಟ್ಟಕ್ಕೆ 2 ವರ್ಷಗಳ ಕಾಲ ಇಳಿಸಿ ಆದೇಶಿಸಿರುತ್ತಾರೆ. ದಿನಾಂಕ 24–09–97 ರಂದು ಇವರನ್ನು ಎ.ಡಿ.ಜಿ.ಪಿ.

ಕೆ.ಎಸ್.ಆರ್.ಪಿ. ರವರು ಕರ್ತವ್ಯಕ್ಕೆ ಪುನರ್ ನೇಮಕ ಮಾಡಿಕೊಂಡು ಸ್ಥಳ ನಿಯುಕ್ತಿ ನೀಡಿರುತ್ತಾರೆ. ಶ್ರೀ. ಎ.ಕೆ. ನಾಗಪ್ಪ ರವರು ಕಡ್ಡಾಯ ನಿವೃತ್ತಿ ಹೊಂದಿ ಸೇವೆಯಿಂದ ಹೊರಗುಳಿದ ಮತ್ತು ಪುನರ್ ನೇಮಕಗೊಂಡ ಅವಧಿ ದಿನಾಂಕ 18–02–97 ರಿಂದ 24–09–97 ರವರೆಗೆ Dies-non ಎಂದು ಪರಿಗಣಿಸಿದೆ ಹಾಗೂ ತದನಂತರ 2 ವರ್ಷಗಳ ಅವಧಿಗೆ ಇವರ ವಿರುದ್ಧ ಚಾಲ್ತಿ ಶಿಕ್ಷೆ ಇರುತ್ತದೆ.

ದಿನಾಂಕ 16–04–2007 ರಂದು ಸಹಾಯಕ ಕಮಾಂಡೆಂಟ್‌ಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದ್ದು, ಸದರಿ ಪಟ್ಟಿಯಲ್ಲಿ ಶ್ರೀ. ಎ.ಕೆ. ನಾಗಪ್ಪ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ:53 ರಲ್ಲಿ ನಿಗಧಿಪಡಿಸಿ ಅರ್ಹತಾ ದಿನಾಂಕವನ್ನು 23–10–97 ಎಂದು ನೀಡಲಾಗಿರುತ್ತದೆ. ಈ ಅವಧಿಯಲ್ಲಿ ಇವರ ವಿರುದ್ಧ ಚಾಲ್ತಿ ಶಿಕ್ಷೆ ಇರುತ್ತದೆ ಹಾಗೂ ಇವರಿಗೆ Date of actual Promotion / Appointment 29–01–2004 ಆಗಿರುತ್ತದೆ. ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ 16–04–2007 ರಲ್ಲಿ ಪ್ರಕಟಿಸಿರುವ ಕರಡು ಜೇಷ್ಠತಾ ಪಟ್ಟಿಯಲ್ಲಿ ಇವರಿಗೆ ನೀಡಿರುವ ಕ್ರಮ ಸಂಖ್ಯೆ: 53 ತಪ್ಪಾಗಿ ನಮೂದಿಸಿರುವುದನ್ನು ಪರಿಶೀಲಿಸಲಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 193 ಪೊಸಿಪ 2008, ಬೆಂಗಳೂರು, ದಿನಾಂಕ 18ನೇ ನವೆಂಬರ್ 2008.**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, Dies-non ಅವಧಿಯಾದ ದಿನಾಂಕ 18–02–97 ರಿಂದ 24–09–97 ರವರೆಗಿನ ಅವಧಿಯನ್ನು ಹೊರತುಪಡಿಸಿ ದಿನಾಂಕ 16–04–2007 ರಂದು ಸಹಾಯಕ ಕಮಾಂಡೆಂಟ್‌ಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ನೀಡಿರುವ ಕ್ರಮ ಸಂಖ್ಯೆ:53 ನ್ನು ಬದಲಾಯಿಸಿ ಶ್ರೀ. ಎ.ಆರ್. ಸಾವಂತ್ ಇವರಿಗೆ ನೀಡಿರುವಂತೆ ಮುಂಬಡ್ತಿಯ ದಿನಾಂಕವನ್ನೇ ಅರ್ಹತಾ ದಿನಾಂಕವನ್ನಾಗಿ ಪರಿಗಣಿಸಿ ಕ್ರಮ ಸಂಖ್ಯೆ: 69 ಮತ್ತು 70 ರ ಮಧ್ಯೆ 69(ಎ) ಎಂದು ನಿಗಧಿಪಡಿಸಲಾಗಿದೆ.

ಸಹಾಯಕ ಕಮಾಂಡೆಂಟ್‌ಗಳ ಜೇಷ್ಠತಾ ಪಟ್ಟಿಯಲ್ಲಿ ಸೂಕ್ತವಾಗಿ ಮಾರ್ಪಾಡನ್ನು ಪ್ರತ್ಯೇಕವಾಗಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1611

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎಂ.ಬಿ. ನಾಗರಾಜ್, ಡಿವೈ.ಎಸ್.ಪಿ ಮತ್ತು ಶ್ರೀ ಹೆನ್ರಿ ಡಿ. ಮೆಂಡೋನ್ಜ, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿಯ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ದಿನಾಂಕ 20–03–2008.
2) ಕೆ.ಎ.ಟಿ. ಅರ್ಜಿ ಸಂಖ್ಯೆ:1440/2008 ರಲ್ಲಿ ದಿ:03–04–2008 ರಂದು ನೀಡಿದ ತೀರ್ಪು.
3) ಶ್ರೀ. ಎಂ.ಬಿ. ನಾಗರಾಜು, ಡಿವೈ.ಎಸ್.ಪಿ ಮತ್ತು ಶ್ರೀ ಹೆನ್ರಿ ಡಿ. ಮೆಂಡೋನ್ಜ, ಡಿವೈ.ಎಸ್.ಪಿ. ರವರ ಮನವಿಗಳು.

**ಪ್ರಸ್ತಾವನೆ:**

ಸರ್ಕಾರವು ದಿನಾಂಕ 20–3–2008ರಂದು ಡಿ.ವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ ಎಂ.ಬಿ. ನಾಗರಾಜು, ಡಿ.ವೈ.ಎಸ್.ಪಿ. ಉಡುಪಿ ವಿಭಾಗ ಇವರನ್ನು ಡಿ.ವೈ.ಎಸ್.ಪಿ. ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇಲ್ಲಿಗೆ ವರ್ಗಾಯಿಸಿ ಇವರ ಸ್ಥಾನದಲ್ಲಿ ಶ್ರೀ ಹೆನ್ರಿ ಡಿ. ಮೆಂಡೋನ್ಜ, ಡಿವೈ.ಎಸ್.ಪಿ. ಇವರನ್ನು ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ ಎಂ.ಬಿ. ನಾಗರಾಜು, ಡಿವೈ.ಎಸ್.ಪಿ. ರವರು ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ: 1440/2008 ದಾಖಲಿಸಿದ್ದು ಸದರಿ ಆದೇಶದ ಮೇಲೆ ಕೆ.ಎ.ಟಿ.ಯು ದಿನಾಂಕ 3–4–2008ರಂದು ತೀರ್ಪು ನೀಡಿ ಸದರಿಯವರ ಮನವಿಯನ್ನು ಪುನರ್ ಪರಿಶೀಲಿಸಿ ವೃಂದ ನಿರ್ವಹಣಾ ಪ್ರಾಧಿಕಾರವು ನಿಯಮಾನುಸಾರ ಕ್ರಮಕೈಗೊಳ್ಳಲು ಆದೇಶಿಸಿದೆ. ಅದರಂತೆ ದಿನಾಂಕ 19–7–2008 ರಂದು ಪುನರ್ ಪರಿಶೀಲಿಸಿದ ವೃಂದ ನಿರ್ವಹಣಾ ಪ್ರಾಧಿಕಾರವು ದಿನಾಂಕ 20–3–2008ರ ವರ್ಗಾವಣೆಯ ಆದೇಶವನ್ನು ಈ ಕೆಳಗಿನಂತೆ ಮಾರ್ಪಡಿಸಲು ತೀರ್ಮಾನಿಸಿತು.

**ಸರ್ಕಾರದ ಆದೇಶ ಸಂಖ್ಯೆ: ಒಇ 103 ಪೊಸಿಪ 2008(ಭಾಗ) ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಸರ್ಕಾರವು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 10 ಪೊಸಿಪ 2008 ದಿನಾಂಕ 20–03–2008ರ ವರ್ಗಾವಣೆ ಆದೇಶವನ್ನು ಭಾಗಶ: ಮಾರ್ಪಡಿಸಿ ಈ ಕೆಳಗಿನಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಹುದ್ದೆ | ವರ್ಗಾವಣೆಯ ನಂತರ ಸ್ಥಳನಿಯುಕ್ತಿ |
|---|---|---|
| 1. | ಶ್ರೀ ಎಂ.ಬಿ. ನಾಗರಾಜು, ಡಿವೈ.ಎಸ್.ಪಿ, ಉಡುಪಿ ಉಪ ವಿಭಾಗ | ಡಿವೈ.ಎಸ್.ಪಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು. |
| 2. | ಶ್ರೀ ವಿಶ್ವನಾಥ, ಡಿವೈ.ಎಸ್.ಪಿ, ಸಿ.ಎಸ್.ಪಿ, ಉಡುಪಿ ವಿಭಾಗ, ಉಡುಪಿ. | ಶ್ರೀ ಎಂ.ಬಿ. ನಾಗರಾಜು, ಡಿವೈ.ಎಸ್.ಪಿ ಇವರ ಸ್ಥಾನದಲ್ಲಿ. |

ಈ ಆದೇಶವನ್ನು ಮಾನ್ಯ ಮುಖ್ಯ ಮಂತ್ರಿಯವರ ಕಚೇರಿಯ ಟಿಪ್ಪಣಿ ಸಂಖ್ಯೆ: ಪಿಎಸ್ ಸಿಎಂ/ಎಫ್/ 1496/2008 ದಿನಾಂಕ 20–08–2008 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1243

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**FOREST, ECOLOGY AND ENVIRONMENT SECRETARIAT**

**No. FEE 149 FLL 2008, Bangalore, Dated 22nd November 2008**

**CORRIGENDUM**

In para 1 and 4 of the preamble and in the order portion of the Government Order No. FEE 99 FLL 2005, dated 16-10-2007, for the words "Sy.No.9" of Londa village of Khanapur Taluk, Belgaum District "shall be read as Sy.No. 9A. 20" of Londa and 13 of Mohishet village of Khanapur Taluk, Belgaum District.

By order and in the name of the Governor of Karnataka,

PR. 1605

**P.R. KALAVATHI**

Under Secretary to Government,

Forest, Ecology and Environment Department.

**ಕಂದಾಯ ಸಚಿವಾಲಯ**

**ವಿಷಯ :** ಸರ್ಕಾರದ ಸ್ವಾಯತ್ತ ಸಂಸ್ಥೆಗಳಿಗೆ ಒತ್ತುವರಿಯಿಂದ ತೆರವುಗೊಳಿಸಿದ ಸರ್ಕಾರಿ ಜಮೀನುಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಆರ್‌ಡಿ 265 ಎಲ್.ಜಿ.ಬಿ. 2007 (ಭಾಗ–6), ದಿನಾಂಕ 18–10–2007.
2. ಬೃಹತ್ ಮಹಾನಗರ ಪಾಲಿಕೆ ವಿಶೇಷ ಆಯುಕ್ತರು (ಆಡಳಿತ) ಇವರ ಪತ್ರ ಸಂಖ್ಯೆ COMM/PSR/ A2/5245/08-09, dt: 4-10-2008.
3. ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಪತ್ರ ಸಂ: ನಅಇ 300 ಎಂಎನ್‌ಜಿ 2005, ದಿನಾಂಕ 22–9–2008.

**ಪ್ರಸ್ತಾವನೆ :**

ಉಲ್ಲೇಖ (1)ರಲ್ಲಿನ ಸರ್ಕಾರದ ಆದೇಶ ದಿನಾಂಕ 18–10–2007ರಲ್ಲಿ ಒತ್ತುವರಿಯಿಂದ ಮುಕ್ತಗೊಳಿಸಿದ 3313.26 ಎಕರೆ ಸರ್ಕಾರಿ ಜಮೀನನ್ನು ಸಾರ್ವಜನಿಕ ಉಪಯೋಗಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮ 1969ರ ನಿಯಮ 20(1)(ಸಿ)ರಂತೆ ವಿವಿಧ ಸರ್ಕಾರದ ಸ್ವಾಯತ್ತ ಸಂಸ್ಥೆಗಳಿಗೆ ಮಂಜೂರು ಮಾಡಿ ಆದೇಶ ನೀಡಲಾಗಿತ್ತು.

ಇದರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಘನ ತ್ಯಾಜ್ಯ ವಸ್ತು ವಿಲೇವಾರಿಗೆ ಮಾರ್ಗಸೂಚಿ ದರ ಶೇ. 50ರಷ್ಟು ದರ ವಿಧಿಸಿ 744 ಎಕರೆ ಜಮೀನನ್ನು ಮಂಜೂರು ಮಾಡಲಾಗಿತ್ತು.

ಉಲ್ಲೇಖ (2)ರ ತಮ್ಮ ಪತ್ರದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಿಶೇಷ ಆಯುಕ್ತರು ಇವರು ದಿನಾಂಕ: 4–10–2008ರಂದು ಸರ್ಕಾರಕ್ಕೆ ಬರೆದ ಪತ್ರದಲ್ಲಿ ಘನತ್ಯಾಜ್ಯ ವಸ್ತು ವಿಲೇವಾರಿಗಾಗಿ ಮೊದಲನೆ ಹಂತದಲ್ಲಿ ಕನಿಷ್ಟ 500 ಎಕರೆ ಜಮೀನನ್ನು ಉಚಿತವಾಗಿ ಹಂಚಿಕೆ ಮಾಡುವಂತೆ ಕೋರಿದ್ದಾರೆ.

ಉಲ್ಲೇಖ (3)ರ ದಿ: 22–2–2008ರ ಪತ್ರದಲ್ಲಿ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರು ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಘನತ್ಯಾಜ್ಯ ವಸ್ತುಗಳ ನಿರ್ವಹಣೆಗೆ ಸರ್ಕಾರವು ಸ್ಥಳೀಯ ಸಂಸ್ಥೆಗಳಿಗೆ ಉಚಿತವಾಗಿ ನೀಡಬೇಕಾಗಿದ್ದು, ಸಾರ್ವಜನಿಕ ಹಿತದೃಷ್ಟಿಯಿಂದ ಇದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಮಂಜೂರು ಮಾಡುವಂತೆ ಕೋರಿದ್ದಾರೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಂಜೂರಾಗಿರುವ 744 ಎಕರೆ ಜಮೀನನ್ನು 400 ಎಕರೆಗೆ ಸೀಮಿತಗೊಳಿಸಲು ಸರ್ಕಾರ ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 265 ಎಲ್.ಜಿ.ಬಿ. 2007(ಪಿ6) ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನಲೆಯಲ್ಲಿ ದಿ: 18–10–2007ರಂದು ಆದೇಶ ಸಂ. ಆರ್.ಡಿ. 265 ಎಲ್.ಜಿ.ಬಿ. 2007(ಪಿ6)ರಲ್ಲಿನ ಆದೇಶದ ಅನುಬಂಧ–1ನ್ನು ಭಾಗಶಃ ಮಾರ್ಪಡಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ 744ಕ್ಕೆ ಬದಲಾಗಿ 400 ಎಕರೆ ಜಮೀನನ್ನು ಮಾತ್ರ ಉಚಿತವಾಗಿ ಮಂಜೂರು ಮಾಡಲು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

ಗ್ರಾಮವಾರು, ಸರ್ವೆ ನಂಬರ್‌ವಾರು ವಿವರಗಳ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1649

**ಇ. ಈಶ್ವರ್ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಮೈಸೂರು ಮತ್ತು ಮಂಗಳೂರು ನಗರಗಳಲ್ಲಿ ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಖಾಸಗಿ ಸಹಭಾಗಿತ್ವದ ಮಾದರಿಯಲ್ಲಿ (PPP Mode) ಮಾಹಿತಿ ತಂತ್ರಜ್ಞಾನ ಪಾರ್ಕ್‌ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 17–7–2008ರಂದು ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಂದ ಘೋಷಿಸಲಾದ ಆಯವ್ಯಯ ಭಾಷಣ.
2. ವ್ಯವಸ್ಥಾಪಕ ನಿರ್ದೇಶಕರು, KEONICS ರವರ ಪತ್ರ ಸಂಖ್ಯೆ: KSEDC/MD/ITSEZ/Mangalore & Mysore/08,09 ದಿನಾಂಕ 5–11–08.

**ಪ್ರಸ್ತಾವನೆ :**

ದಿನಾಂಕ 17–7–2008ರಂದು ಮಾನ್ಯ ಮುಖ್ಯಮಂತ್ರಿಗಳಿಂದ ಘೋಷಿಸಲಾದ ಆಯವ್ಯಯ ಭಾಷಣದಲ್ಲಿ "ಹುಬ್ಬಳ್ಳಿ–ಧಾರವಾಡ, ಬೆಳಗಾವಿ, ಗುಲ್ಬರ್ಗಾ, ಶಿವಮೊಗ್ಗ, ದಾವಣಗೆರೆ, ಮಂಗಳೂರು ಮುಂತಾದ ನಗರಗಳಲ್ಲಿ ಖಾಸಗಿ ಸಹಭಾಗಿತ್ವದೊಡನೆ ಹಾಗೂ ಸರ್ಕಾರಿ ಸಂಸ್ಥೆಯಾದ ಕೆಐಎಡಿಬಿ ಜೊತೆಗೂಡಿ ಐಟಿಬಿಟಿ ಪಾರ್ಕ್‌ಗಳನ್ನು ಸ್ಥಾಪಿಸಲು ಉದ್ದೇಶಿಸಿದೆ. ಕಿಯೋನಿಕ್ಸ್ ಸಂಸ್ಥೆಯು ಈ ಸಂಬಂಧ ಸೂಕ್ತ ಕ್ರಮಗಳನ್ನು ಆರಂಭಿಸಲಿದ್ದು, ಈ ಉದ್ದೇಶಕ್ಕಾಗಿ 10 ಕೋಟಿ ರೂ.ಗಳ ಬಂಡವಾಳವನ್ನು ಒದಗಿಸಲಾಗಿದೆ". ಈ ನಿಟ್ಟಿನಲ್ಲಿ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮಂಗಳೂರು ಮತ್ತು ಮೈಸೂರಿನಲ್ಲಿ ಐಟಿ ಪಾರ್ಕ್‌ಗಳನ್ನು ತಮ್ಮ ಸ್ವಂತ ಬಂಡವಾಳ ಹೂಡಿಕೆಯಿಂದ ಹಾಗೂ ಖಾಸಗಿ ಸಹಭಾಗಿತ್ವದಿಂದ (PPP Mode) ಈ ಕೆಳಕಂಡಂತೆ ರೂ. 31.68 ಕೋಟಿಗಳ ವೆಚ್ಚದಲ್ಲಿ ಸ್ಥಾಪನೆ ಮಾಡುವ ಬಗ್ಗೆ ಪ್ರಸ್ತಾವನೆಗಳನ್ನು ಸಲ್ಲಿಸಿರುತ್ತಾರೆ.

(ಕೋಟಿ ರೂ.ಗಳಲ್ಲಿ)

| ಕ್ರಮ ಸಂಖ್ಯೆ | ವೆಚ್ಚದ ವಿವರ | ಮಂಗಳೂರು | ಮೈಸೂರು |
|---|---|---|---|
| 1 | ಜಮೀನಿಗಾಗಿ | 1.50 | 0.18 |
| 2 | ವಿದ್ಯುತ್‌ಶಕ್ತಿ, ನೀರು ಸರಬರಾಜು, Powerbackup, Highspeed Comminication connectivity ಒಳಗೊಂಡಂತೆ ಕಟ್ಟಡ ನಿರ್ಮಾಣ | 15.00 | 15.00 |
| | **ಒಟ್ಟು ವೆಚ್ಚ ರೂ.** | **16.50** | **15.18** |

**ಬಂಡವಾಳ ಹೂಡಿಕೆಯ ವಿವರಗಳು**

| | | | |
|---|---|---|---|
| 1 | ಜಮೀನಿಗಾಗಿ ಕಿಯೊನಿಕ್ಸ್ ಸಂಸ್ಥೆಯ ಕೊಡುಗೆ | 1.50 | 0.18 |
| 2 | ಕಟ್ಟಡ ನಿರ್ಮಾಣಕ್ಕಾಗಿ ಕಿಯೋನಿಕ್ಸ್ ಸಂಸ್ಥೆಯ ಕೊಡುಗೆ | 5.00 | 5.00 |
| 3 | ಖಾಸಗಿ ಸಹಭಾಗಿತ್ವದಿಂದ ಈಕ್ವಿಟಿ (Equity) | 10.00 | 10.00 |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ITD 38 MDA 2008, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೈಸೂರು ಮತ್ತು ಮಂಗಳೂರಿನಲ್ಲಿ ಐಟಿ ಪಾರ್ಕ್‌ಗಳನ್ನು KEONICSನ ಸ್ವಂತ ಬಂಡವಾಳ ಹಾಗೂ ಖಾಸಗಿ ಸಹಭಾಗಿತ್ವದ ಮಾದರಿ (PPP Mode) ಯಲ್ಲಿ ಒಟ್ಟು ರೂ. 31.68 ಕೋಟಿಗಳ ವೆಚ್ಚದಲ್ಲಿ ಸ್ಥಾಪಿಸುವ ಯೋಜನೆಗೆ ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

"ಖಾಸಗಿ ಪಾಲುದಾರರನ್ನು ನಿಯಮಾನುಸಾರ ಆಯ್ಕೆ ಮಾಡಿ ಸರ್ಕಾರದ ಪೂರ್ವಾನುಮತಿ ಪಡೆಯತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1631

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇ. ನೆರವು 2006–07ನೇ ಸಾಲಿಗೆ.

**ಓದಲಾಗಿದೆ:**
1. ದಿನಾಂಕ 12–4–2007ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ 13–6–07.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2), ದಿನಾಂಕ 12–9–07.
4. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (2), ದಿನಾಂಕ 19–10–07.
5. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (3), ದಿನಾಂಕ 2–11–2007.
6. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (4), ದಿನಾಂಕ 1–1–08.
7. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (6), ದಿನಾಂಕ 22–2–08.
8. ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2), ದಿನಾಂಕ 12–3–2008.
9. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (7), ದಿನಾಂಕ 20–3–08.
10. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (8), ದಿನಾಂಕ 25–3–08.
11. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (9), ದಿನಾಂಕ 21–5–2008.
12. ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2), ದಿನಾಂಕ 13–6–2008.
13. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (10), ದಿನಾಂಕ 30–6–2008.
14. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ಎಸ್‌ಟಿಟಿ/13/2007–08, ದಿನಾಂಕ 12–8–2008.
15. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ ಎಸ್‌ಟಿಟಿ/ 13/ 2006–07, ದಿನಾಂಕ 10–9–2008, ದಿನಾಂಕ 12–9–2008.
16. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ ಎಸ್‌ಟಿಟಿ/ 13/ 2007–08, ದಿನಾಂಕ 11–9–2008, ದಿನಾಂಕ 16–9–2008.
17. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ ಎಸ್‌ಟಿಟಿ/ ಪರಿಹಾರ/ ಚಾಮರಾಜನಗರ/ 2008–09, ದಿನಾಂಕ 14–8–2008.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (2) ರಿಂದ (6) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ. 3,62,18,916/– ರೈತರಿಗೆ ಪರಿಹಾರ ಧನ ರೂ. 25,00,00.000/– ಮತ್ತು ಕಾರ್ಖಾನೆಗಳಿಗೆ ಸಹಾಯಧನ 21,13,92,000/– ರೂ.ಗಳು ಸೇರಿ ಒಟ್ಟು 49,76,10,916/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) (9) (10) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಕಬ್ಬು ಬೆಳೆದ ರೈತರಿಗೆ ಪರಿಹಾರ ನೀಡಲು ಕ್ರಮವಾಗಿ 7.00 ಕೋಟಿ ರೂಗಳು, 6.64 ಕೋಟಿ ರೂಗಳು ಮತ್ತು 1,25,11.000/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8) ರಲ್ಲಿರುವ ಆದೇಶಗಳಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯ ನಂತರ ಅಂದರೆ ದಿನಾಂಕ 1–6–07 ರಿಂದ 31–7–07ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ 8.75 ಕೋಟಿ ರೂಗಳ ಸಹಾಯಧನ ಬಿಡುಗಡೆಗೆ ಮಂಜೂರಾತಿ ನೀಡಲಾಗಿದ್ದು, ಅದರಂತೆ ಮೇಲೆ ಓದಲಾದ (10)ರಲ್ಲಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಟನ್ ಕಬ್ಬಿಗೆ ರೂ. 100/–ನಂತೆ 8,74,92.000/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (11)ರಲ್ಲಿರುವ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನಂತರ ಅಂದರೆ 16–4–2007 ರಿಂದ 31–5–2007ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ ಕಬ್ಬಿಗೆ ರೂ. 100/– ರಂತೆ ರೂ. 10,00,00.000/–ಗಳ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (13) ರಲ್ಲಿರುವ ಆದೇಶದಲ್ಲಿ ಬಿಜಾಪುರ, ಮೈಸೂರು ಮತ್ತು ಬೆಳಗಾಂ ಜಿಲ್ಲೆಗಳ ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು 3.00 ಕೋಟಿ ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (14)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಹಾಗೂ ಸಕ್ಕರೆ ನಿರ್ದೇಶಕರವರ ಪತ್ರದಲ್ಲಿ ಶ್ರೀ ರೇಣುಕಾ ಶುಗರ್ಸ್ (ಲಿ) ಮನೋಳಿ ಮತ್ತು ಬುರ್ಲಟ್ಟಿ ಕಾರ್ಖಾನೆಗಳ ವ್ಯಾಪ್ತಿಯ ಸವದತ್ತಿ, ಬೈಲಹೊಂಗಲ ಮತ್ತು ಅಥಣಿ ತಾಲ್ಲೂಕಿನಲ್ಲಿನ ಕಬ್ಬನ್ನು ಪಕ್ಕದ ಮಹಾರಾಷ್ಟ್ರ ರಾಜ್ಯದ ಶ್ರೀ ರೇಣುಕಾ ಶುಗರ್ಸ್ (ಲಿ) ಅಜರ ಮತ್ತು ಅರಗ ಸಕ್ಕರೆ ಕಾರ್ಖಾನೆಗಳಿಗೆ ರೈತರು ಸರಬರಾಜು ಮಾಡಿದ್ದು, ಈ ಸಂಬಂಧ ಸಾಗಾಣಿಕೆ ಸಹಾಯಧನ 1,02,38,901/–ರೂಗಳನ್ನು ಜಿಲ್ಲಾಧಿಕಾರಿ ಬೆಳಗಾಂರವರಿಗೆ ಬಿಡುಗಡೆ ಮಾಡಲು ಆಯುಕ್ತರು ಕಬ್ಬು ಅಭಿವೃದ್ಧಿರವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (15), (16) ಮತ್ತು (17)ರಲ್ಲಿನ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರಗಳಲ್ಲಿ ಕಬ್ಬು ಬೆಳೆದ ರೈತರಿಗೆ 12 ತಿಂಗಳು ಹೆಚ್ಚಿನ ಅವಧಿ ಪೂರೈಸಿ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಪಕ್ವವಾದ ಕಬ್ಬಿಗೆ ಪ್ರತಿ ಹೆಕ್ಟೇರ್‌ಗೆ 25,000/– ರೂ.ಗಳ ಸಹಾಯಧನವಾಗಿ ಮೈಸೂರು ಜಿಲ್ಲೆಗೆ ರೂ. 75,93,250/–, ಬಿಜಾಪುರ ಜಿಲ್ಲೆಗೆ ರೂ. 24,47,250/–, ಧಾರವಾಡ ಜಿಲ್ಲೆಗೆ ರೂ. 1,20,500/–, ಗದಗ ಜಿಲ್ಲೆಗೆ ರೂ. 3,09,500/– ಮತ್ತು ಚಾಮರಾಜನಗರ ಜಿಲ್ಲೆ ರೂ. 96,76,050/– ರೂಗಳನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಆಯುಕ್ತರು ಕಬ್ಬು ಅಭಿವೃದ್ಧಿರವರು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007 (ಭಾ–2)(10) ಬೆಂಗಳೂರು, ದಿನಾಂಕ: 24ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ 12 ತಿಂಗಳು ಪೂರೈಸಿ ಪಕ್ವವಾದ ಕಟಾವಾಗದೆ ಜಮೀನಿನಲ್ಲಿ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರ್‌ಗೆ 25,000/– ರೂ.ಗಳ ಪರಿಹಾರಧನ ರೂ. 2,01,34,300/–ಗಳನ್ನು ಮತ್ತು ಬೆಳೆಗಾರ ಜಿಲ್ಲೆಯಿಂದ ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಕಬ್ಬಿಗೆ ಪ್ರತಿ ಟನ್‌ಗೆ ಪ್ರತಿ ಕಿ.ಮೀ.ಗೆ ರೂ. 2/–ರಂತೆ ರೂ. 1,02,38,903/–ಗಳು ಸೇರಿ ಒಟ್ಟು 3,03,73,203/– ಕೋಟಿ ರೂ.ಗಳನ್ನು (ಮೂರು ಕೋಟಿ ಮೂರು ಲಕ್ಷ ಎಪ್ಪತ್ತಮೂರು ಸಾವಿರದ ಇನ್ನೂರ ಮೂರು ರೂಪಾಯಿಗಳು ಮಾತ್ರ) ರೈತರಿಗೆ ಪಾವತಿಸುವ ಸಲುವಾಗಿ ಈ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| | | |
|---|---|---|
| | **ರೈತರಿಗೆ ಪರಿಹಾರಧನ** | |
| 1) | ಮೈಸೂರು ಜಿಲ್ಲೆಗೆ | ರೂ. 75,93.250–00 ಜಿಲ್ಲಾಧಿಕಾರಿ ಮೈಸೂರು. |
| 2) | ಬಿಜಾಪುರ ಜಿಲ್ಲೆಗೆ | ರೂ. 24,47,250–00 ಜಿಲ್ಲಾಧಿಕಾರಿ ಬಿಜಾಪುರ |
| 3) | ಧಾರವಾಡ ಜಿಲ್ಲೆಗೆ | ರೂ. 1,20,500–00 ಜಿಲ್ಲಾಧಿಕಾರಿ ಧಾರವಾಡ |
| 4) | ಗದಗ ಜಿಲ್ಲೆಗೆ | ರೂ. 3,09,500–00 ಜಿಲ್ಲಾಧಿಕಾರಿ ಗದಗ |
| 5) | ಚಾಮರಾಜನಗರ ಜಿಲ್ಲೆಗೆ | ರೂ. 96,76,050–00 ಜಿಲ್ಲಾಧಿಕಾರಿ ಚಾ.ನಗರ. |
| | **ಒಟ್ಟು** | **ರೂ. 2,01,34,300–00** |
| | **ಸಾಗಾಣಿಕೆ ಸಹಾಯಧನ** | |
| 1) | ಬೆಳಗಾಂ ಜಿಲ್ಲೆಗೆ | ರೂ. 1,02,38,903–00 ಜಿಲ್ಲಾಧಿಕಾರಿ ಬೆಳಗಾಂ |
| | **ಒಟ್ಟು** | **ರೂ. 3,03,73,203–00** |

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ) 106 ಸಹಾಯಧನ" ಅಡಿಯಲ್ಲಿ 50.00 ಕೋಟಿ ರೂ.ಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ 3,03,73,203/– ಕೋಟಿ ರೂ.ಗಳನ್ನು ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ 13–6–2007 ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 1373 ವೆಚ್ಚ–1/08, ದಿನಾಂಕ 21–11–08ರಂದು ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1627

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಹೊಸದಾಗಿ ಸನ್ನದು ಹಾಗೂ ಮದ್ಯಸಾರವನ್ನು ವಿತರಿಸುವ ಕುರಿತು ಉನ್ನತ ಅಧಿಕಾರಿಯ ಸಮಿತಿ (High Power Committee) ರಚಿಸುವ ಬಗ್ಗೆ.

**ಓದಲಾಗಿದೆ:**
1. ಎಫ್‌ಡಿ 24 ಇಡಿಸಿ 2002, ದಿನಾಂಕ 6–4–2002.
2. ಎಫ್‌ಡಿ 44 ಇಎಫ್‌ಎಲ್ 2002, ದಿನಾಂಕ 23–9–2002.
3. ಎಫ್‌ಡಿ 27 ಇಎಫ್‌ಎಲ್ 2003, ದಿನಾಂಕ 29–7–2003.
4. ಎಫ್‌ಡಿ 27 ಇಎಫ್‌ಎಲ್ 2003, ದಿನಾಂಕ 21–10–2003.
5. ಎಫ್‌ಡಿ 46 ಇಎಫ್‌ಎಲ್ 2004, ದಿನಾಂಕ 11–2–2004.
6. ಎಫ್‌ಡಿ 46 ಇಎಫ್‌ಎಲ್ 2004, ದಿನಾಂಕ 12–4–2005.
7. ಎಫ್‌ಡಿ 43 ಇಎಫ್‌ಎಲ್ 2005, ದಿನಾಂಕ 18–1–2006.
8. ಎಫ್‌ಡಿ 09 ಇಎಫ್‌ಎಲ್ 2007, ದಿನಾಂಕ 16–3–2007.
9. ಎಫ್‌ಡಿ 21 ಇಎಫ್‌ಎಲ್ 2008, ದಿನಾಂಕ 16–5–2008.

**ಪ್ರಸ್ತಾವನೆ :**

ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಹೊಸದಾಗಿ ಸನ್ನದು ನೀಡಲು ಹಾಗೂ ಮದ್ಯಸಾರವನ್ನು ಹಂಚಿಕೆ ಮಾಡುವ ಸಂಬಂಧ ಪರಿಶೀಲಿಸಲು ಉಲ್ಲೇಖ (1),(3),(5),(7) ಮತ್ತು (8)ರ ಆದೇಶಗಳಲ್ಲಿ ಉನ್ನತ ಅಧಿಕಾರದ ಸಮಿತಿಯನ್ನು ಒಂದು ವರ್ಷದ ಅವಧಿಗೆ ರಚಿಸಿ/ಪುನರ್ ರಚಿಸಿ, ಮುಂದುವರಿಸಿಕೊಂಡು ಬಂದಿತ್ತು.

ಮದ್ಯಸಾರ ಹಂಚಿಕೆ ಕೋರಿ ಸ್ವೀಕರಿಸುವ ಪ್ರಸ್ತಾವನೆಗಳಿಗೆ ಸಂಬಂಧಿಸಿದ ರಾಸಾಯನಿಕ ಕೈಗಾರಿಕೆಗಳಿಗೆ ಭೇಟಿ ನೀಡಿ, ಅಲ್ಲಿ ಒದಗಿಸಲಾದ ಮೂಲಭೂತ ಸೌಕರ್ಯಗಳು, ಘಟಕಗಳು ತಯಾರಿಸಲು ಉದ್ದೇಶಿಸಿರುವ ವಸ್ತುಗಳಿಗೆ ಕೋರಿರುವ ಮದ್ಯಸಾರ ಹಂಚಿಕೆ, ಇತ್ಯಾದಿಗಳ ಬಗ್ಗೆ ಪರಿಶೀಲಿಸಿ, ಉನ್ನತ ಅಧಿಕಾರದ ಸಮಿತಿಗೆ ವರದಿ ಸಲ್ಲಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (2), (4), (6) ಮತ್ತು (9)ರ ಆದೇಶಗಳಲ್ಲಿ ತಾಂತ್ರಿಕ ಸದಸ್ಯರನ್ನೊಳಗೊಂಡಂತೆ ತಾಂತ್ರಿಕ ಉಪ ಸಮಿತಿಯನ್ನು ರಚಿಸಿ, ಆಗಿಂದ್ದಾಗ್ಗೆ ಮುಂದುವರೆಸಿಕೊಂಡು ಬಂದಿತ್ತು.

ಮೇಲೆ ಓದಲಾದ (9)ರ ಆದೇಶದಲ್ಲಿ ಉನ್ನತ ಸಮಿತಿಯನ್ನು ದಿನಾಂಕ 16–3–2008ರಿಂದ 3 ತಿಂಗಳ ಅವಧಿಗೆ ಮಾತ್ರ ವಿಸ್ತರಿಸಲಾಗಿದ್ದು, ಈ ಸಮಿತಿಯು ದಿನಾಂಕ 15–6–2008ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ ಆದೇಶಗಳಲ್ಲಿ ಉನ್ನತ ಮಟ್ಟದ ಸಮಿತಿ ಹಾಗೂ ತಾಂತ್ರಿಕ ಉಪ ಸಮಿತಿಯಲ್ಲಿ ತಾಂತ್ರಿಕ ತಜ್ಞರು ಸದಸ್ಯರಾಗಿರುವುದರಿಂದ, ಈ ಎರಡೂ ಸಮಿತಿಗಳು ಸೇರಿ ಪ್ರಸ್ತಾವನೆಗಳನ್ನು ಶಿಫಾರಸ್ಸು ಮಾಡಿ ನಂತರ ಅರ್ಹ ಕೈಗಾರಿಕೆಗಳಿಗೆ ಸಕಾಲದಲ್ಲಿ ಮದ್ಯಸಾರ ದೊರೆಯುವಲ್ಲಿ ವಿಳಂಬವಾಗುವ ಸಾದ್ಯತೆಗಳಿರುವುದರಿಂದ, ತ್ವರಿತವಾಗಿ ಏಕಗವಾಕ್ಷಿ ಕ್ರಮದಲ್ಲಿ ನಿರ್ಣಯ ಕೈಗೊಳ್ಳಲು ಅನುಕೂಲವಾಗುವಂತೆ, ಉನ್ನತ ಮಟ್ಟದ ಒಂದೇ ಸಮಿತಿಯನ್ನು ಪುನರ್ ರಚಿಸುವುದು ಅಗತ್ಯವೆಂದು ಕಂಡು ಬಂದಿದ್ದು, ಅದರಂತೆ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 21 ಇಎಫ್‌ಎಲ್ 2008, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ಹಂಚಿಕೆ ಮಾಡಲು ಉನ್ನತ ಮಟ್ಟದ ಸಮಿತಿಯನ್ನು (High Power Committee) ಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಈ ಕೆಳಕಂಡಂತೆ ರಚಿಸಲಾಗಿದೆ.

| | | |
|---|---|---|
| 1) | ಮಾನ್ಯ ಅಬಕಾರಿ ಸಚಿವರು | ಅಧ್ಯಕ್ಷರು |
| 2) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 3) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | ಸದಸ್ಯರು |
| 4) | ಪ್ರಾಧ್ಯಾಪಕರು, ರಾಸಾಯನಿಕ ಇಂಜಿನಿಯರಿಂಗ್ ವಿಭಾಗ Indian Institute of Science, Bangalore | ಸದಸ್ಯರು |
| 5) | ಡಾ: ಎಂ.ಎಸ್. ಕಾಮತ್, ಪ್ರೊಫೆಸರ್ ಆಫ್ ಕೆಮಿಕಲ್ ಇಂಜಿನಿಯರಿಂಗ್, ಎನ್.ಐ.ಟಿ–ಕೆ.ಸೂರತ್ಕಲ್, ಮಂಗಳೂರು | ಸದಸ್ಯರು |
| 6) | ಅಬಕಾರಿ ಆಯುಕ್ತರು | ಸದಸ್ಯ–ಕಾರ್ಯದರ್ಶಿ |

ರಾಸಾಯನಿಕ ಘಟಕಗಳಿಂದ ರೆಕ್ಟಿಫೈಡ್ ಸ್ಪಿರಿಟ್/ಡಿನೇಚರ್ಡ್ ಸ್ಪಿರಿಟ್ (ಮದ್ಯಸಾರ) ಹಂಚಿಕೆ ಕೋರಿ ಬರುವ ಪ್ರಸ್ತಾವನೆಗಳನ್ನು ಉನ್ನತ ಮಟ್ಟದ ಸಮಿತಿಯು (High Power Committee) ಪರಿಶೀಲಿಸಿ, ಸದರಿ ಘಟಕಗಳಿಗೆ ಮೂಲಭೂತ ಸೌಕರ್ಯ, ಆರ್.ಎಸ್./ಡಿ.ಎಸ್. ಇತ್ಯಾದಿಗಳನ್ನು ಗಮನಿಸಿ, ಅರ್ಹತೆಗನುಸಾರವಾಗಿ ಶಿಫಾರಸ್ಸು ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1490

**ಬಿ.ಎನ್. ಜಗದೀಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿ ಅನುಷ್ಠಾನಕ್ಕಾಗಿ 2008–09ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರವರ ಪತ್ರ ಸಂಖ್ಯೆ: ಡಿಎಸ್‌ಕೆ/ರಕರ/ಅನುದಾನ/2008–09, ದಿನಾಂಕ 25–4–2008.
2. ಪರಿಷ್ಕೃತ ಸರ್ಕಾರದ ಆದೇಶ ಸಂಖ್ಯೆ: ಸಿಐ 174 ಆಂಆಸ (1) 2008, ದಿನಾಂಕ 18–9–2008.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 93 ಎಸ್‌ಜಿಎಫ್ 2008, ದಿನಾಂಕ 24–6–2008.
4. ಸರ್ಕಾರದ ಆದೇಶ ಸಂಖ್ಯೆ: ಸಿಐ 93 ಎಸ್‌ಜಿಎಫ್ 2008, ದಿನಾಂಕ 2–8–2008.

**ಪ್ರಸ್ತಾವನೆ :**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆ ಕಾಮಗಾರಿಗಳ ಅನುಷ್ಠಾನಕ್ಕಾಗಿ 2008–09ನೇ ಸಾಲಿನಲ್ಲಿ ಒದಗಿಸಲಾಗಿರುವ ರೂ. 160/– ಲಕ್ಷಗಳಲ್ಲಿ ರೂ. 159.78 ಲಕ್ಷಗಳನ್ನು ಬಿಡುಗಡೆಗೊಳಿಸಲು ಸಕ್ಕರೆ ನಿರ್ದೇಶಕರು ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ 25–4–2008ರ ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ.

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಕಾರ್ಖಾನೆಯ ಹೆಸರು | ವರ್ಷ | ಮೊತ್ತ |
|---|---|---|---|
| 1. | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ಲಿ) | 1998–1999 | 02.00 |
| 2. | ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1999–2000 | 29.23 |
| 3. | ಗೋದಾವರಿ ಸಕ್ಕರೆ ಕಾರ್ಖಾನೆ (ಲಿ) ಚಿಕ್ಕೋಡಿ ವಿಭಾಗ | 1999–2000 | 32.69 |
| 4. | ರೈತರ ಸಹಕಾರಿ ಸಕ್ಕರೆ ಕಾರ್ಖಾನೆ (ಲಿ) | 1999–2000 | 17.00 |
| 5. | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ (ಲಿ) | 1999–2000 | 43.40 |
| 6. | ಐ.ಎಸ್.ಆರ್. ಶುಗರ್ಸ್ (ಲಿ) | 2000–2001 | 14.18 |
| 7. | ಶ್ಯಾಮನೂರು ಶುಗರ್ಸ್ (ಲಿ) | 2000–2001 | 21.28 |
| | **ಒಟ್ಟು** | | **159.78** |

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ 2008–09ನೇ ಸಾಲಿಗೆ ಈ ಉದ್ದೇಶಕ್ಕಾಗಿ ರೂ. 160/– ಲಕ್ಷಗಳ ಅನುದಾನವನ್ನು ಇಲಾಖೆಯ ಲೆಕ್ಕ ಶೀರ್ಷಿಕೆ 4860–04–800–0–01–Plan-172 Roads ಅಡಿಯಲ್ಲಿ ಒದಗಿಸಲಾಗಿದೆ. ಸದರಿ ಹಣದಲ್ಲಿ ರೂ. 159.78 ಲಕ್ಷಗಳನ್ನು ಬಿಡುಗಡೆ ಮಾಡಲು ಸಕ್ಕರೆ ನಿರ್ದೇಶಕರು ಉಲ್ಲೇಖ (1)ರಲ್ಲಿನ ಪತ್ರದಲ್ಲಿ ಕೋರಿರುತ್ತಾರೆ.

2008–09ನೇ ಸಾಲಿನಲ್ಲಿ ಒದಗಿಸಲಾಗಿದ್ದ ರೂ. 160/– ಲಕ್ಷಗಳ ಅನುದಾನದಲ್ಲಿ ಮೊದಲನೇ ಮತ್ತು 2ನೇ ಕಂತುಗಳಲ್ಲಿ ತಲಾ ರೂ. 40/– ಲಕ್ಷದಂತೆ ಒಟ್ಟು ರೂ. 80/– ಲಕ್ಷಗಳನ್ನು ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇಲೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿರವರಿಗೆ ಮೇಲೆ ಓದಲಾದ (3) ಮತ್ತು (4)ರಲ್ಲಿನ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (1)ರ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಬಾಕಿ ಉಳಿದ ರೂ. 79.78 ಲಕ್ಷಗಳನ್ನು ಬಿಡುಗಡೆ ಮಾಡಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 93 ಎಸ್‌ಜಿಎಫ್ 2008 ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2008.**

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ 7 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4860–04–800–0–01–(ಯೋಜನೆ)–172–ರಸ್ತೆಗಳು ಅಡಿ ಒದಗಿಸಲಾಗಿರುವ (4)ರ ಆದೇಶಗಳಲ್ಲಿ ಈಗಾಗಲೇ ಬಿಡುಗಡೆಗೊಳಿಸಲಾಗಿದ್ದು, ಮತ್ತೆ ರೂ. 79.78 ಲಕ್ಷಗಳನ್ನು (ಎಪ್ಪತ್ತೊಂಬತ್ತು ಲಕ್ಷ ಎಪ್ಪತ್ತೆಂಟು ಸಾವಿರ ರೂಗಳು ಮಾತ್ರ) ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರುರವರಿಗೆ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 866 ವೆಚ್ಚ–1/2008, ದಿನಾಂಕ 10–7–2008ರಲ್ಲಿ ನೀಡಲಾದ ಸಹಮತಿಯಂತೆ ಹಾಗೂ ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16–5–2008ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1486

**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** 2008–09ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ:1/ಎಡಿಜಿಪಿ/ಟಿಟಿಎಂ/ಎಂಡಿಎನ್/2008–09, ದಿನಾಂಕ 12–5–2008.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 12–5–2008ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, 2008–09ನೇ ಸಾಲಿನ ಪೊಲೀಸ್ ಆಧುನೀಕರಣ ಕ್ರಿಯಾ ಯೋಜನೆಯಡಿ ಕೇಂದ್ರ ಸರ್ಕಾರವು ಮಂಜೂರು ಮಾಡಿರುವ ಅನುದಾನ ರೂ. 10.00 ಕೋಟಿಯನ್ನು ಅನುಮೋದನೆಗೊಂಡಿರುವ ಕ್ರಿಯಾ ಯೋಜನೆಗೆ ಉಪಯೋಗಿಸಿಕೊಳ್ಳಲು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಎಫ್‌ಎಸ್ 2007, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪೊಲೀಸ್ ಆಧುನೀಕರಣ ಯೋಜನೆಯಡಿ 2008–09ನೇ ಸಾಲಿನಲ್ಲಿ ಕೇಂದ್ರದಿಂದ ರಾಜ್ಯದ ನಿಧಿಗೆ ಜಮೆಯಾಗಿರುವ ರೂ. 10.00 ಕೋಟಿಯನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ) ಅನುಮೋದನೆಗೊಂಡ ಕ್ರಿಯಾ ಯೋಜನೆಗಳಿಗೆ ಉಪಯೋಗಿಸಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಅನುದಾನವನ್ನು ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡ ಯೋಜನೆಗಳಿಗೆ ಮಾತ್ರ ಉಪಯೋಗಿಸಿ–ಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 439 ವೆಚ್ಚ-6, 2008, ದಿನಾಂಕ 8-8-2008ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1242

**ಇನಾಯತ್ ಉಲ್ಲಾಖಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು ರವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ.18/ಸಿಆರ್-5/2007/ಮಂಗಳೂರು ದಿನಾಂಕ 12-12-2007.
2. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/121/2007-08, ದಿನಾಂಕ: 28-12-2007.
3. ಸರ್ಕಾರದ ಆದೇಶ ಸಂಖ್ಯೆ: ವಾಕೈ 5 ಕೈಸೇವಿ 2008, ದಿ: 5-2-2008.
4. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ-18/ಸಿಆರ್-5/2007, ದಿನಾಂಕ 2-6-2008.
5. ಸರ್ಕಾರದ ಆದೇಶ ಸಂಖ್ಯೆ: ವಾಕೈ 5 ಕೈಸೇವಿ 2008, ದಿ: 30-6-2008.
6. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ-18/ಸಿಆರ್-5/2007, ದಿನಾಂಕ 23-7-2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಆರೋಪಿತ ಸರ್ಕಾರಿ ಅಧಿಕಾರಿ, ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಗಳೂರು ರವರು ರೂ. 1,000/-ಗಳ ಲಂಚವನ್ನು ಫಿರ್ಯಾದುದಾರರಿಂದ ಸ್ವೀಕರಿಸಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿ ಬಿದ್ದಿದ್ದರಿಂದ, ಅಮಾನತ್ತಿನಲ್ಲಿಡಬೇಕೆಂದು ಹಾಗೂ ಅವರ ಲೀನ್ (ಸ್ಥಾನ)ವನ್ನು ಬೇರೆ ಕಡೆಗೆ ವರ್ಗಾಯಿಸಬೇಕೆಂದು ಸರ್ಕಾರಕ್ಕೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಗಳೂರು ರವರ ವಿರುದ್ಧ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳುರು ರವರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರ ಪ್ರಕಾರ ಮಂಗಳೂರು ಲೋಕಾಯುಕ್ತ ಠಾಣೆ, ಮೊಕದ್ದಮೆ ನಂ. 5/2007ರ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುವುದರಿಂದ, ಸದರಿ ಪ್ರಕರಣದಲ್ಲಿ ಸದರಿಯವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿಯವರನ್ನು ಕೂಡಲೇ ಅಮಾನತ್ತಿನಲ್ಲಿಡಲು ಹಾಗೂ ಅವರ ಲೀನ್‌ನ್ನು ಬೇರೆ ಕಡೆಗೆ ವರ್ಗಾಯಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಮಂಗಳೂರು, ಇವರು ಫಿರ್ಯಾದುದಾರರಿಂದ ಲಂಚದ ಹಣವನ್ನು ಸ್ವೀಕರಿಸಿರುವುದು ಸಾಬೀತಾಗಿರುವುದರಿಂದ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, (ಅಮಾನತ್ತು) ರವರ ವಿರುದ್ಧ ಟ್ರಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು, ರವರನ್ನು ಉಪ ನಿರ್ದೇಶಕರ ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ, ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು,

ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)ರ ಅನ್ವಯ ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಶ್ರೀ ಎಸ್. ರಾಜಯ್ಯ, ಅಂದಿನ ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು, ರವರನ್ನು ಅಮಾನತ್ತುಗೊಳಿಸಿದೆ. ಈ ಪ್ರಕರಣದಲ್ಲಿ ತನಿಖೆಯು ಪೂರ್ಣಗೊಂಡಿದ್ದು, ಆರೋಪಿ ಶ್ರೀ ಎಸ್. ರಾಜಯ್ಯ, ಅಂದಿನ ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಯಯ್ಯಾಡಿ, ಮಂಗಳೂರು ರವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಕ್ರಮ ಕೈಗೊಳ್ಳಲಾಗಿದೆ ಮತ್ತು ಸರ್ಕಾರಿ ಆದೇಶ ಹಾಗೂ ಅಧಿಸೂಚನೆಗಳ ಅನ್ವಯ ಸೂಕ್ತ ಕ್ರಮ ಕೈಗೊಳ್ಳಲು ಹಾಗೂ ಆಪಾದಿತ ಸರ್ಕಾರಿ ಅಧಿಕಾರಿಯನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿದ್ದಲ್ಲಿ ಮರು ನೇಮಕ ಮಾಡುವಾಗ ಈ ಪ್ರಕರಣ ನಡೆದ ಸ್ಥಳವನ್ನು ಹೊರತು ಪಡಿಸಿ ಬೇರೆ ಸ್ಥಳದಲ್ಲಿ ನೇಮಕ ಮಾಡಲು ಸದರಿ ವಿಷಯದಲ್ಲಿ ತೆಗೆದುಕೊಂಡ ಕ್ರಮದ ಬಗ್ಗೆ ಮಾಹಿತಿ ನೀಡಲು ಸರ್ಕಾರಕ್ಕೆ ಕೋರಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 05 ಕೈಸೇವಿ 2008, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಈ ಪ್ರಕರಣವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್. ರಾಜಯ್ಯ, ಅಂದಿನ ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಯಯ್ಯಾಡಿ, ಮಂಗಳೂರು ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆ ಶಿಸ್ತು ಕ್ರಮಗಳನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿದೆ.

ಅಮಾನತ್ತು ತೆರವುಗೊಳಿಸಿದ ನಂತರ, ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು (ಅಮಾನತ್ತು) ಇವರನ್ನು ಉಪ ನಿರ್ದೇಶಕರು, (ಖಾಗ್ರಾ) ಜಿಲ್ಲಾ ಪಂಚಾಯತ್, ಮಡಿಕೇರಿ ಇಲ್ಲಿನ ಖಾಲಿ ಹುದ್ದೆಗೆ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1471

**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಂ.ಬಿ. ನಾಗರಾಜ್, ಡಿವೈ.ಎಸ್.ಪಿ., ಉಡುಪಿ ಉಪ ವಿಭಾಗ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿರುವ ಆದೇಶ ಸ್ಥಿರೀಕರಿಸುವ ಬಗ್ಗೆ.

**ಓದಲಾಗಿದೆ:** i) ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5):35:2008–09, ದಿನಾಂಕ 30–9–2008.

ii) CD/5/DSP/2008-09, ದಿನಾಂಕ 29–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಎಂ.ಬಿ. ನಾಗರಾಜ್, ಡಿವೈ.ಎಸ್.ಪಿ., ಉಡುಪಿ ರವರು ಅನಧಿಕೃತವಾಗಿ ಮಾಧ್ಯಮಗಳಲ್ಲಿ ಸಂದರ್ಶನ ನೀಡಿರುವ ಆರೋಪಕ್ಕಾಗಿ ಶ್ರೀಯುತರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ದಿನಾಂಕ 29–9–2008ರಂದು ಆದೇಶ ಹೊರಡಿಸಲಾಗಿರುತ್ತದೆ. ಡಿವೈ.ಎಸ್.ಪಿಯ ಹುದ್ದೆಯ ಅಧಿಕಾರಿಗಳಿಗೆ ಸರ್ಕಾರವು ನೇಮಕಾತಿ ಹಾಗೂ ಶಿಸ್ತು ಪ್ರಾಧಿಕಾರಿಯಾದ್ದರಿಂದ ಪೊಲೀಸ್ ಮಹಾ ನಿರ್ದೇಶಕರವರ ಕಛೇರಿ ಜ್ಞಾಪನ ಸಂಖ್ಯೆ: ಸಿಬಿ(5):ಪಿ:ಡಿ.ಎಸ್.ಪಿ:2008–09 ದಿನಾಂಕ 29–9–2008ರಲ್ಲಿ ಶ್ರೀ ಎಂ.ಬಿ. ನಾಗರಾಜ್, ಡಿವೈ.ಎಸ್.ಪಿ., ರವರನ್ನು ಅಮಾನತ್ತುಗೊಳಿಸಿರುವುದಕ್ಕೆ ಸ್ಥಿರೀಕರಣ ಆದೇಶ ಹೊರಡಿಸಲು ಕೋರಿರುತ್ತಾರೆ.

ಡಿಜಿ ಮತ್ತು ಐಜಿಪಿ ಅವರ ಪ್ರಸ್ತಾವನೆ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 364 ಪೊಸಿಪ 2008, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತುನಡವಳಿ) ನಿಯಮ 1965ರ ನಿಯಮ 5(1)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಬಿ. ನಾಗರಾಜ್, ಡಿವೈ.ಎಸ್.ಪಿ., ಉಡುಪಿ ರವರ ವಿರುದ್ಧ ಶಿಸ್ತುಕ್ರಮ ಕಾಯ್ದಿಟ್ಟು ದಿನಾಂಕ 29–9–2008ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿದ ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಆದೇಶವನ್ನು ಸ್ಥಿರೀಕರಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಅಧಿಕಾರಿ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1612

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PUBLIC WORKS, PORTS & IWT SECRETARIAT**

**Sub:** Authorising the Project Director, Karnataka State Highway Improvement Project to draw Rs.50,000/- or less at time on AC Bill- reg.

**Read:** 1) Proceedings of the 31st meeting of the Steering Committee of KSHIP.

**PREAMBLE:**

The Project is gearing-up for implementation of the KSHIP-II activities. The Project conducts frequent review meetings attended by the officials of the World Bank, GOI and GOK. Apart from World Bank's bi-annual missions, workshops and review meetings are also being held on various aspects including discussion on studies undertaken through KSHIP, periodical review meetings by the top management. The Project also conducts workshops and training on various topics for stakeholders of the road sector for policy making and smooth implementation of the Project activities, including dissemination of the lessons learnt during the implementation of the Project. The Project has to incur incidental expenditure for the above activities, like hosting dinner, working lunch, refreshments etc.,

During the KSHIP-I, there was no provision for incurring the expenditure by drawing Temporary Advance amount from the treasury, resulted in difficulties for conducting the above said activities. Hence, the approval is sought for authorising the Project Implementation authorities i.e. P.I.U. to draw Temporary Advance amount from treasury on AC Bill to incur the above mentioned incidental meeting and workshop expenditure for smooth implementation of the Project activities. Therefore, sanction may be accorded to draw not exceeding Rs. 50,000/- through AC bill in each time. The advance amount drawn from the treasury will be settled through submission of NDC bills as and when required as per provisions of the KFC. This expenditure shall be debited under the Head of Account 3054-03-001-1-01-051 General Expenses.

In the Proceedings of the 31st meeting of the Steering Committee of KSHIP read above, the World Bank assisted Karnataka State Highway Improvement Project KSHIP-II has commenced. As the activities of the Project are in full swing, it is considered necessary to issue authorization to Project Director, PIU, KSHIP Office to draw Rs.50,000/- or less at time on AC bill for meeting the emergent office expenditure and to make suitable arrangement during the visits of the World Bank missionary apart from the conducting meeting and workshops during the course of the project appraisal and implementation of the activities, including, disseminations of the lesson learnt during the implementation of the Project. The Project has to incur incidental expenditure for the above activities like hosting dinners, working lunch, refreshments etc.,

The Government has examined the proposal in detail and hence, the following order.

**GOVERNMENT ORDER No.PWD 208 EAP 2008(P) BANGALORE, DATED 25th October 2008**

The Government are pleased to authorize the Project Director, Project Implementation Unit, Karnataka State Highway Improvement Project, Bangalore to draw Rs.50,000/- (Rupees Fifty thousand only) or less at a time on A.C. bill for meeting the emergent office expenditure during the year 2008-09.

The expenditure in this behalf shall be debited to the Budget Head 3054-03-001-1-01-051 General Expenses during the year 2008-09.

By order and in the name of the Governor of Karnataka,

P.R. 1507

**M. DEVIPRASAD**

Under Secretary to Government

Public Works, Ports & IWT Department (EAP)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ನಿರ್ದೇಶಕರ ಮಂಡಳಿಯನ್ನು ಪುನರ್‌ರಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ ಲೋಇ 32 ಇಎಪಿ 2006, ದಿನಾಂಕ 03-07-2006.
2) ಸರ್ಕಾರದ ಆದೇಶ ಸಂಖ್ಯೆ.ಲೋಇ 34 ಇಎಪಿ 2008 ದಿನಾಂಕ 22-09-2008.
3) ಅನಧಿಕೃತ ಟಿಪ್ಪಣಿ ಸಂಖ್ಯೆ.ಮೂಅಇ 30 ಮೂಇವಿ 08 ದಿನಾಂಕ 17-10-2008.

**ಪ್ರಸ್ತಾವನೆ:**

1. ಮೇಲೆ ಓದಲಾದ ಆದೇಶ (1) ರಲ್ಲಿ ರಚಿಸಲಾಗಿದ್ದ ಕರ್ನಾಟಕ ರಸ್ತೆ ಅಭಿವೃದ್ದಿ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯನ್ನು ಓದಲಾದ ಆದೇಶ (2) ರಲ್ಲಿ ಪುನರ್ ರಚಿಸಲಾಗಿದೆ.

2. ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ (3) ರಲ್ಲಿ ಶ್ರೀ. ಗೌರವ ಗುಪ್ತ, ಭಾ.ಆ.ಸೇ. ವಿಶೇಷ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರಿಗೆ ವರ್ಗಾವಣೆಯಾಗಿರುವುದರಿಂದ ಇವರ ಸ್ಥಾನದಲ್ಲಿ ಶ್ರೀ. ಅರವಿಂದ ಜಾದವ್, ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರನ್ನು ನಿಗಮದ ಮಂಡಳಿಯಲ್ಲಿ ಒಬ್ಬ ನಿರ್ದೇಶಕರನ್ನಾಗಿ ನೇಮಿಸಲು ಕೋರಲಾಗಿದೆ.

3. ಓದಲಾದ ಆದೇಶ (2) ರಲ್ಲಿ ಕೆಳಗಿನಂತೆ ನಿಗಮದ ನಿರ್ದೇಶಕರ ಮಂಡಳಿಯನ್ನು ರಚಿಸಲಾಗಿತ್ತು.

| | | |
|---|---|---|
| 1) | ಶ್ರೀ. ಉದಾಸಿ ಚನ್ನಬಸಪ್ಪ ಮಹಾಲಿಂಗಪ್ಪ,<br>ಸನ್ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರು, | ನಿರ್ದೇಶಕರು ಹಾಗೂ ಅಧ್ಯಕ್ಷರು |
| 2) | ಶ್ರೀ. ಆರ್.ಬಿ.ಅಗವಾನೆ, ಭಾ.ಆ.ಸೇ<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | ನಿರ್ದೇಶಕರು |
| 3) | ಶ್ರೀ. ಕೆ.ಜ್ಯೋತಿರಾಮಲಿಂಗಮ್, ಭಾ.ಆ.ಸೇ.<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ನಿರ್ದೇಶಕರು |
| 4) | ಶ್ರೀ. ಗೌರವ ಗುಪ್ತ, ಭಾ.ಆ.ಸೇ.<br>ಸರ್ಕಾರದ ವಿಶೇಷ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯ ಅಭಿವೃದ್ಧಿ ಇಲಾಖೆ | ನಿರ್ದೇಶಕರು |
| 5) | ಶ್ರೀ. ಡಿ.ವೆಂಕಟೇಶ್ವರರಾವ್, ಭಾ.ಆ.ಸೇ.<br>ಪ್ರಧಾನ ಕಾರ್ಯದರ್ಶಿಗಳು, ಸಾರ್ವಜನಿಕ ಉದ್ದಿಮೆಗಳ ಇಲಾಖೆ | ನಿರ್ದೇಶಕರು |
| 6) | ಶ್ರೀ. ಟಿ.ಸುಕುಮಾರ್<br>ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | ನಿರ್ದೇಶಕರು |
| 7) | ಶ್ರೀ. ಅನಿಲ್ ಕುಮಾರ್ ಝಾ ಭಾ.ಆ.ಸೇ.<br>ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (ಸುಧಾರಣೆ ಮತ್ತು ಪಿಎಂಯು) | ನಿರ್ದೇಶಕರು |
| 8) | ಶ್ರೀ. ಬಿ.ಬಸವರಾಜು, ಭಾ.ಆ.ಸೇ.<br>ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ | ನಿರ್ದೇಶಕರು |
| 9) | ಶ್ರೀ. ಆರ್.ಜಯಪ್ರಸಾದ್<br>ತಾಂತ್ರಿಕ ಸಲಹೆಗಾರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ನಿರ್ದೇಶಕರು |
| 10) | ಶ್ರೀ. ಪಿ.ಜಯಪಾಲ್,<br>ಪ್ರಾದೇಶಿಕ ಮುಖ್ಯಸ್ಥರು, ಹುಡ್ಕೋ | ನಿರ್ದೇಶಕರು |
| 11) | ಶ್ರೀ.ಸಿ.ಇ.ಜಿ.ಜಸ್ಟೋ, ನಿವೃತ್ತ ಪ್ರೊಫೆಸರ್ | ನಿರ್ದೇಶಕರು |
| 12) | ಶ್ರೀ.ನಾರಾಯಣಪ್ಪ, ನಿವೃತ್ತ ಅಧೀಕ್ಷಕ ಇಂಜಿನಿಯರ್ | ನಿರ್ದೇಶಕರು |

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಗುಲ್ಬರ್ಗಾ ಜಿಲ್ಲೆಯ ವ್ಯಾಪ್ತಿಯಲ್ಲಿನ 13 ಜಿಲ್ಲಾ ಮುಖ್ಯ ರಸ್ತೆಗಳು ಮತ್ತು 6 ಗ್ರಾಮೀಣ ರಸ್ತೆಗಳನ್ನು ಒಂದಕ್ಕೊಂದು ಸಂಕೀರ್ಣಗೊಳಿಸಿ ಮತ್ತು ಪುನರ್ ವ್ಯವಸ್ಥೆಗೊಳಿಸಿ ಶಹಾಪುರದಿಂದ ಶಿವರಾಂಪುರ ಆಂಧ್ರಪ್ರದೇಶದ ಗಡಿಯವರೆಗೆ ಒಟ್ಟು 176.20 ಕಿ.ಮೀ ಉದ್ದದ ರಸ್ತೆಯ ಸರಪಳಿಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ), ಧಾರವಾಡ ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಡಾ॥ ನಂಜುಂಡಪ್ಪ ಪ್ರಾದೇಶಿಕ ಅಸಮತೋಲನ ನಿವಾರಣಾ ವರದಿಯ ಶಿಫಾರಸ್ಸನ್ನಾಧರಿಸಿ ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಅತ್ಯಂತ ಹಿಂದುಳಿದ ಪ್ರದೇಶವೆಂದು ಗುರ್ತಿಸಿರುವ ಗುಲ್ಬರ್ಗಾ ಜಿಲ್ಲೆಯ ವ್ಯಾಪ್ತಿಯಲ್ಲಿ ರಸ್ತೆ ಕೊರತೆಯನ್ನು ನಿವಾರಿಸಲು ಈ ರಸ್ತೆಯು ನಿರ್ದಿಷ್ಟಪಡಿಸಿರುವ ಮಾನದಂಡಗಳನ್ನು ಪೂರೈಸುವುದರಿಂದ, ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆ ಸರಪಳಿಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾಪಿಸಲಾಗಿದೆ.

| ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿಯ ಉದ್ದ (ಕಿ.ಮೀ) |
|---|---|
| ಶಹಾಪೂರದಿಂದ ಶಿವರಾಂಪೂರ ಆಂಧ್ರಪ್ರದೇಶ ಗಡಿಯವರೆಗೆ ರಾಜ್ಯ ಹೆದ್ದಾರಿ ಮಾರ್ಗ ವಾಡಿ–ಶಹಾಬಾದ–ಗುಲ್ಬರ್ಗಾ–ಹೆಬ್ಬಾಳ–ಕಾಳಗಿ–ಮಂಗಲಗಿ–ನಿಡಗುಂದಾ– ಕೊಂಚಾವರಂ ಮೂಲಕ | 176.20 |

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 500 ಸಿಆರ್‌ಎಂ 2007, ದಿನಾಂಕ: 12ನೇ ನವೆಂಬರ್ 2008**

ಗುಲ್ಬರ್ಗಾ ಜಿಲ್ಲೆಯ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳ ಸರಪಳಿಯನ್ನು ರಾಜ್ಯ ಹೆದ್ದಾರಿಯೆಂದು ನಾಮಕರಣ ಮಾಡಿ ಘೋಷಿಸಿದೆ.

| ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿಯ ಉದ್ದ (ಕಿ.ಮೀ) |
|---|---|---|
| 149 | ಶಹಾಪೂರದಿಂದ ಶಿವರಾಂಪೂರ ಆಂಧ್ರಪ್ರದೇಶ ಗಡಿಯವರೆಗೆ ರಾಜ್ಯ ಹೆದ್ದಾರಿ ಮಾರ್ಗ ವಾಡಿ–ಶಹಾಬಾದ–ಗುಲ್ಬರ್ಗಾ–ಹೆಬ್ಬಾಳ–ಕಾಳಗಿ–ಮಂಗಲಗಿ–ನಿಡಗುಂದಾ–ಕೊಂಚಾವರಂ ಮೂಲಕ | 176.20 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1595

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾದುಹೋಗುವ ಕೊಂಕಣ ರೈಲ್ವೆ ನಿಲ್ದಾಣದಿಂದ ಸಂಪರ್ಕಿಸುವ ಅಪ್ರೋಚ್ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರಸಂಖ್ಯೆ: ಸಿಬಿಎನ್/ಹೈಆ್ಯಸೆ/ಕ.ಸಂ.7/2/ಗ್ರಾರಸ್ತೆ/ಮೇಲ್ದರ್ಜೆ/ಕಾರವಾರ/08–09/02291, ದಿನಾಂಕ: 11–6–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾಯ್ದುಹೋಗುವ ಕೊಂಕಣ ರೈಲ್ವೆ ನಿಲ್ದಾಣದಿಂದ ಸಂಪರ್ಕಿಸುವ ಈ ಕೆಳಕಂಡ ಗ್ರಾಮೀಣ/ಅಪ್ರೋಚ್ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| | **ಕಾರವಾರ ತಾಲ್ಲೂಕು** | |
| 1 | ಅಸ್ನೋಟಿ ರೈಲ್ವೆ ನಿಲ್ದಾಣದಿಂದ ರಾಜ್ಯ ಹೆದ್ದಾರಿ–34ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.50 |
| 2 | ಕಾರವಾರ ರೈಲ್ವೆ ನಿಲ್ದಾಣದಿಂದ ರಾಜ್ಯ ಹೆದ್ದಾರಿ–6ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.50 |
| | **ಒಟ್ಟು** | **1.00** |
| | **ಅಂಕೋಲಾ ತಾಲ್ಲೂಕು** | |
| 3 | ಹಾರವಾಡ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.10 |
| 4 | ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 1.00 |
| | **ಒಟ್ಟು** | **1.10** |
| | **ಕುಮಟಾ ತಾಲ್ಲೂಕು** | |
| 5 | ಗೋಕರ್ಣ ರೈಲ್ವೆ ನಿಲ್ದಾಣದಿಂದ ರಾಜ್ಯ ಹೆದ್ದಾರಿ–143ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.50 |
| 6 | ಕುಮಟಾ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.40 |
| | **ಒಟ್ಟು** | **0.90** |
| | **ಹೊನ್ನಾವರ ತಾಲ್ಲೂಕು** | |
| 7 | ಕರ್ಕಿ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 1.00 |
| 8 | ಮಂಕಿ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.40 |
| | **ಒಟ್ಟು** | **1.40** |
| | **ಭಟ್ಕಳ ತಾಲ್ಲೂಕು** | |
| 9 | ಮುರ್ಡೇಶ್ವರ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.20 |
| 10 | ಭಟ್ಕಳ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 1.50 |
| | **ಒಟ್ಟು** | **1.70** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 484 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2008**

ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾಯ್ದುಹೋಗುವ ಕೊಂಕಣ ರೈಲ್ವೆ ನಿಲ್ದಾಣದಿಂದ ಸಂಪರ್ಕಿಸುವ ಒಟ್ಟು 6.10 ಕಿ.ಮೀ ಉದ್ದದ ಈ ಕೆಳಕಂಡ 10 ಗ್ರಾಮೀಣ/ಅಪ್ರೋಚ್ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| | **ಕಾರವಾರ ತಾಲ್ಲೂಕು** | |
| 1. | ಅಸ್ನೋಟಿ ರೈಲ್ವೆ ನಿಲ್ದಾಣದಿಂದ ರಾಜ್ಯ ಹೆದ್ದಾರಿ–34ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.50 |
| 2. | ಕಾರವಾರ ರೈಲ್ವೆ ನಿಲ್ದಾಣದಿಂದ ರಾಜ್ಯ ಹೆದ್ದಾರಿ–6ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.50 |
| | **ಒಟ್ಟು** | **1.00** |
| | **ಅಂಕೋಲಾ ತಾಲ್ಲೂಕು** | |
| 3. | ಹಾರವಾಡ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.10 |
| 4. | ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ–17ಕ್ಕೆ ಕೂಡುವ ಅಪ್ರೋಚ್ ರಸ್ತೆ | 1.00 |
| | **ಒಟ್ಟು** | **1.10** |
| | **ಕುಮಟಾ ತಾಲ್ಲೂಕು** | |
| 5. | ಗೋಕರ್ಣ ರೈಲ್ವೆ ನಿಲ್ದಾಣದಿಂದ ರಾಜ್ಯ ಹೆದ್ದಾರಿ–143ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.50 |

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 6. | ಕುಮಟಾ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ-17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.40 |
| | **ಒಟ್ಟು** | **0.90** |
| | **ಹೊನ್ನಾವರ ತಾಲ್ಲೂಕು** | |
| 7. | ಕರ್ಕಿ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ-17ಕ್ಕೆ ಕೂಡುವ ಅಪ್ರೋಚ್ ರಸ್ತೆ | 1.00 |
| 8. | ಮಂಕಿ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ-17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.40 |
| | **ಒಟ್ಟು** | **1.40** |
| | **ಭಟ್ಕಳ ತಾಲ್ಲೂಕು** | |
| 9. | ಮುರ್ಡೇಶ್ವರ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ-17ಕ್ಕೆ ಕೂಡುವ ಅಪ್ರೋಚ್ ರಸ್ತೆ | 0.20 |
| 10. | ಭಟ್ಕಳ ರೈಲ್ವೆ ನಿಲ್ದಾಣದಿಂದ ರಾಷ್ಟ್ರೀಯ ಹೆದ್ದಾರಿ-17ಕ್ಕೆ ಕೂಡುವ ಅಪ್ರೋಚ್ ರಸ್ತೆ | 1.50 |
| | **ಒಟ್ಟು** | **1.70** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1584

**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಮೀನಾಕ್ಷಿ ಪಾರ್ಥಸಾರಥಿ, ಸಹಾಯಕ ಪ್ರಾಧ್ಯಾಪಕರು, ಅನಾಟಮಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆರವರ ವಿರುದ್ಧ ಶಿಸ್ತು ಕ್ರಮ-ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** ಅ.ಸ. ಪತ್ರ ಸಂಖ್ಯೆ: ಆಕುಕ 176 ಸಿಜಿಇ 2008, ದಿನಾಂಕ 19-7-2008.

**ಪ್ರಸ್ತಾವನೆ:**

ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ರವರು ಮೇಲೆ ಓದಲಾದ ತಮ್ಮ ಅರೆ ಸರ್ಕಾರಿ ಪತ್ರದಲ್ಲಿ ಡಾ: ಮೀನಾಕ್ಷಿ ಪಾರ್ಥಸಾರಥಿ, ಸಹಾಯಕ ಪ್ರಾಧ್ಯಾಪಕರು, ಅನಾಟಮಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ರವರು ತಮ್ಮ ಖಾಸಗಿ ನರ್ಸಿಂಗ್ ಹೋಂನಲ್ಲಿ ಗರ್ಭದ ಹೆಸರಿನಲ್ಲಿ ಸಾರ್ವಜನಿಕರಿಂದ ಹಣ ಸುಲಿಗೆ ಮಾಡುತ್ತಿದ್ದಾರೆಂದು ದಿನಾಂಕ 22-6-2008 ರಂದು ಸಂಡೇ ಟೈಮ್ಸ್, ಸಂಡೇ ಎಕ್ಸ್‌ಪ್ರೆಸ್, ಉದಯವಾಣಿ, ಪ್ರಜಾವಾಣಿ ಮತ್ತು ಹಿಂದು ವೃತ್ತ ಪತ್ರಿಕೆಗಳಲ್ಲಿ ವರದಿಯಾಗಿದೆಯೆಂದು, ಈ ಬಗ್ಗೆ ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗವು ಆರು ವಾರಗಳೊಳಗೆ ವರದಿಯನ್ನು ಸಲ್ಲಿಸಬೇಕೆಂದು ದಿನಾಂಕ 23-6-2008 ರಂದು ನಿರ್ದೇಶನ ನೀಡಿದೆಯೆಂದು ವರದಿ ಮಾಡುತ್ತಾ ಆ ಪ್ರಕಾರ ವಿಚಾರಣೆ ನಡೆಸಿ ಆಯೋಗಕ್ಕೆ ವರದಿ ಕಳುಹಿಸುವಂತೆ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿನ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿದ ನಂತರ ಡಾ: ಮೀನಾಕ್ಷಿ ಪಾರ್ಥಸಾರಥಿ, ಸಹಾಯಕ ಪ್ರಾಧ್ಯಾಪಕರು, ಅನಾಟಮಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ರವರನ್ನು ಅವರ ವಿರುದ್ಧದ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 290 ಎಂಎಂಇ 2008, ಬೆಂಗಳೂರು, ದಿನಾಂಕ 24ನೇ ಜುಲೈ 2008**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಡಿ) ಪ್ರಕಾರ ಡಾ: ಮೀನಾಕ್ಷಿ ಪಾರ್ಥಸಾರಥಿ, ಸಹಾಯಕ ಪ್ರಾಧ್ಯಾಪಕರು, ಅನಾಟಮಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ರವರನ್ನು ಅವರ ವಿರುದ್ಧದ ತೀವ್ರತರವಾದ ದುರ್ನಡತೆ ಆಪಾದನೆ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಡಾ: ಮೀನಾಕ್ಷಿ ಪಾರ್ಥಸಾರಥಿ, ಸಹಾಯಕ ಪ್ರಾಧ್ಯಾಪಕರು ರವರಿಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಸಂದಾಯಿಸತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಡಾ: ಮೀನಾಕ್ಷಿ ಪಾರ್ಥಸಾರಥಿ, ಸಹಾಯಕ ಪ್ರಾಧ್ಯಾಪಕರು ರವರು ನಿಯಮಾನುಸಾರ ಸಕ್ಷಮ ಪ್ರಾಧಿಕಾರದ ಲಿಖಿತ ಪೂರ್ವನುಮತಿ ಇಲ್ಲದೇ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1129

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ವೈದ್ಯಕೀಯ ಶಿಕ್ಷಣ)

**ವಿಷಯ:** ಇಲಾಖಾ ವಿಚಾರಣೆ – ಡಾ: ಶೀಲಾ ಜಿ. ನಾಯಕ್, ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ಡಾ: ಪಾಂಡುರಂಗ ಶಣೈ ಮತ್ತು ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್, ಪ್ರಾಧ್ಯಾಪಕರುಗಳು (ನಿವೃತ್ತ) – ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 48 ಎಂಎಂಸಿ 2005, ದಿನಾಂಕ 07–06–2005.
2. ಸೂಚನಾ ಪತ್ರ ಸಂಖ್ಯೆ: ಆಕುಕ 48 ಎಂಎಂಸಿ 2005, ದಿನಾಂಕ 07–06–2005.
3. ಡಾ: ಶೀಲಾ. ಜಿ. ನಾಯಕ್ ರವರ ಪತ್ರ ದಿನಾಂಕ 18–08–2005,
4. ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ ರವರ ಪತ್ರ ದಿನಾಂಕ 30–06–2005.
5. ಡಾ: ಪಾಂಡುರಂಗ ಶಣೈ ರವರ ಪತ್ರ ದಿನಾಂಕ 02–07–2005.
6. ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್ ರವರ ಪತ್ರ ದಿನಾಂಕ 01–07–2005.
7. ಸರ್ಕಾರಿ ಆದೇಶ ಸಂಖ್ಯೆ: ಆಕುಕ 48 ಎಂಎಂಸಿ 2005, ದಿನಾಂಕ 20–10–2005.
8. ಕಾರಣ ಕೇಳುವ ನೋಟೀಸು ಸಂಖ್ಯೆ: ಆಕುಕ 48 ಎಂಎಂಸಿ 2004, ದಿನಾಂಕ 18–01–2006.
9. ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್ ರವರ ಪತ್ರ ದಿನಾಂಕ 20–01–2006.
10. ಶ್ರೀ ಟಿ.ಎಸ್. ಪಾಲನೇತ್ರ, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ರವರ ಪತ್ರ ದಿನಾಂಕ 15–06–2006.
11. ಸರ್ಕಾರಿ ಆದೇಶ ಸಂಖ್ಯೆ: ಆಕುಕ 48 ಎಂಎಂಸಿ 2005, ದಿನಾಂಕ 10–07–2006.
12. ಸರ್ಕಾರಿ ಪತ್ರ ಸಂಖ್ಯೆ: ಆಕುಕ 48 ಎಂಎಂಸಿ 2005 (ಭಾ–1), ದಿನಾಂಕ 24–07–2006.
13. ಡಾ: ಪಾಂಡುರಂಗ ಶಣೈ ರವರ ಪತ್ರ ದಿನಾಂಕ 26–10–2006.
14. ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್ ರವರ ಪತ್ರ ದಿನಾಂಕ 18–10–2006.
15. ಸರ್ಕಾರಿ ಪತ್ರ ಸಂಖ್ಯೆ: ಆಕುಕ 48 ಎಂಎಂಸಿ 2005 (ಭಾ), ದಿನಾಂಕ 29–11–2006.
16. ಪತ್ರ ಸಂಖ್ಯೆ: ಪಿಎಸ್ಸಿ 169 ಸಿಎನ್ಎಸ್ 2006, ದಿನಾಂಕ 16–01–2007.

**ಪ್ರಸ್ತಾವನೆ:**

ಡಾ: ಶೀಲಾ ಜಿ. ನಾಯಕ್, ಅಂದಿನ ಪ್ರಾಂಶುಪಾಲರು, ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ಅಂದಿನ ವೈದ್ಯಕೀಯ ಅಧೀಕ್ಷಕರು, ಕೆ.ಆರ್. ಆಸ್ಪತ್ರೆ, ಮೈಸೂರು, ಮತ್ತು ಡಾ: ಪಾಂಡುರಂಗ ಶಣೈ, ಅಂದಿನ ಪ್ರಾಂಶುಪಾಲರು ಹಾಗೂ ವಿಭಾಗ ಮುಖ್ಯಸ್ಥರು, ವಿಧಿ ವೈದ್ಯ ಶಾಸ್ತ್ರ ವಿಭಾಗ, ಮೈಸೂರು ರವರು ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 03–07–2003 ರಂದು 4 ಅನಾಥ ಪುರುಷ ಶವಗಳನ್ನು ಅಕ್ರಮವಾಗಿ ಮತ್ತು ಅನಧಿಕೃತವಾಗಿ ಸಾಗಣೆ ಮಾಡಲು ಎಸಗಿರುವುರನ್ನೆಲಾದ ಕರ್ತವ್ಯ ಲೋಪದ ಬಗ್ಗೆ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರಡಿ ಶಿಸ್ತು ಕ್ರಮ ಜರುಗಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸ್‌ಗಳೊಂದಿಗೆ ಅನುಬಂಧ–1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಗಳನ್ನು ಡಾ: ಶೀಲಾ. ಜಿ. ನಾಯಕ್, ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ಡಾ: ಪಾಂಡುರಂಗ ಶಣೈ ಮತ್ತು ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್, ಪ್ರಾಧ್ಯಾಪಕರುಗಳು (ನಿವೃತ್ತ) ರವರಿಗೆ ಹೊರಡಿಸಿ ಆ ಬಗ್ಗೆ ಅವರ ಲಿಖಿತ ಪ್ರತಿಪಾದನಾ ಹೇಳಿಕೆಗಳನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಆಪಾದಿತ ಸರ್ಕಾರಿ ಅಧಿಕಾರಿಗಳಾದ ಡಾ: ಶೀಲಾ. ಜಿ. ನಾಯಕ್, ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ಡಾ: ಪಾಂಡುರಂಗ ಶಣೈ ಮತ್ತು ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್, ಪ್ರಾಧ್ಯಾಪಕರುಗಳು (ನಿವೃತ್ತ) ರವರು ಮೇಲೆ (3) ರಿಂದ

(6) ರವರೆಗೆ ಓದಲಾದ ತಮ್ಮ ಲಿಖಿತ ಪ್ರತಿಪಾದನಾ ಹೇಳಿಕೆಗಳಲ್ಲಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯುತ್ತ ತಮ್ಮನ್ನು ದೋಷಮುಕ್ತರನ್ನಾಗಿ ಮಾಡುವಂತೆ ಕೋರಿದ್ದರು.

ಮೇಲೆ (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅಪಾದಿತ ಸರ್ಕಾರಿ ಅಧಿಕಾರಿಗಳಾದ ಡಾ: ಶೀಲಾ ಜಿ. ನಾಯಕ್, ಅಂದಿನ ಪ್ರಾಂಶುಪಾಲರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು ಹಾಗೂ ನಿವೃತ್ತ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ನಿವೃತ್ತ ಪ್ರಾಂಶುಪಾಲರು ಹಾಗೂ ಅಂದಿನ ವೈದ್ಯಕೀಯ ಅಧೀಕ್ಷಕರು, ಕೆ.ಆರ್.ಆಸ್ಪತ್ರೆ, ಮೈಸೂರು, ಡಾ: ಪಾಂಡುರಂಗ ಶಣೈ, ನಿವೃತ್ತ ಪ್ರಾಧ್ಯಾಪಕರು, ವಿಧಿ ವೈದ್ಯ ಶಾಸ್ತ್ರ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು ಮತ್ತು ಡಾ: ಕೆ.ಡಬ್ಲ್ಯೂ.ಡಿ ರವಿಚಂದರ್, ನಿವೃತ್ತ ಪ್ರಾಧ್ಯಾಪಕರು, ವಿಧಿ ವೈದ್ಯ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ರವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಶ್ರೀ ಟಿ.ಎಸ್. ಪಾಲನೇತ್ರ, ಜಿಲ್ಲಾ ನ್ಯಾಯಾಧೀಶರು, (ನಿವೃತ್ತ) ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (8)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಅನುಬಂಧ 1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಯನ್ನು ಡಾ: ಕೆ.ಡಬ್ಲ್ಯೂ.ಡಿ ರವಿಚಂದರ್, ನಿವೃತ್ತ ಪ್ರಾಧ್ಯಾಪಕರು, ವಿಧಿ ವೈದ್ಯ ಶಾಸ್ತ್ರ ವಿಭಾಗ ರವರಿಗೆ ಹೊರಡಿಸಿ ಆ ಬಗ್ಗೆ ಅವರ ಲಿಖಿತ ಪ್ರತಿಪಾದನಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್, ಪ್ರಾಧ್ಯಾಪಕರು (ನಿವೃತ್ತ), ವಿಧಿ ವೈದ್ಯ ಶಾಸ್ತ್ರ ವಿಭಾಗ, ರವರು ಮೇಲೆ (9)ರಲ್ಲಿ ಓದಲಾದ ತಮ್ಮ ಲಿಖಿತ ಪ್ರತಿಪಾದನಾ ಹೇಳಿಕೆಯಲ್ಲಿ ತಮ್ಮ ವಿರುದ್ಧದ ಆರೋಪಗಳನ್ನು ತಿರಸ್ಕರಿಸಿದ್ದರು.

ವಿಚಾರಣಾಧಿಕಾರಿಯಾದ ಶ್ರೀ ಟಿ.ಎಸ್.ಪಾಲನೇತ್ರ, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ರವರು ಮೇಲೆ (10)ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಆಪಾದಿತ ಸರ್ಕಾರಿ ಅಧಿಕಾರಿಗಳಾದ ಡಾ: ಶೀಲಾ.ಜಿ.ನಾಯಕ್, ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ಡಾ: ಪಾಂಡುರಂಗ ಶಣೈ ಮತ್ತು ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್, ಪ್ರಾಧ್ಯಾಪಕರುಗಳು (ನಿವೃತ್ತ) ರವರ ವಿರುದ್ಧದ ಆರೋಪಗಳ ಬಗೆಗಿನ ವಿಚಾರಣಾ ವರದಿಯನ್ನು ಮತ್ತು ಸಂಬಂಧಿಸಿದ ದಾಖಲೆಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (11)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವಿಚಾರಣಾಧಿಕಾರಿಯಾದ ಶ್ರೀ ಟಿ.ಎಸ್. ಪಾಲನೇತ್ರ, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ರವರಿಗೆ ಸಂಚಿತ ಸಂಭಾವನೆಯನ್ನು ನೀಡಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (12)ರಲ್ಲಿ ಓದಲಾದ ಸರ್ಕಾರದ ಪತ್ರದೊಂದಿಗೆ ವಿಚಾರಣಾಧಿಕಾರಿಗಳ ವರದಿಯ ಪ್ರತಿಯನ್ನು ಡಾ: ಪಾಂಡುರಂಗ ಶಣೈ ಮತ್ತು ಡಾ: ಕೆ.ಡಬ್ಲ್ಯೂ.ಡಿ.ರವಿಚಂದರ್, ಪ್ರಾಧ್ಯಾಪಕರುಗಳು (ನಿವೃತ್ತ) ರವರಿಗೆ ಹೊರಡಿಸಿ ಆ ಬಗ್ಗೆ ಅವರ ಅಹವಾಲೇನಾದರೂ ಇದ್ದಲ್ಲಿ ಲಿಖಿತ ರೂಪದಲ್ಲಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಪಾಂಡುರಂಗ ಶಣೈ ರವರು ಮೇಲೆ (13)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ತಾನು ಅನಾಥ ಶವಗಳನ್ನು ಸಾಗಿಸುತ್ತಿದ್ದ ಕಾರು ಚಾಲಕನಿಗೆ/ಮಾಲೀಕನಿಗೆ ಅನುಮತಿ ಪತ್ರ ನೀಡಿರಲಿಲ್ಲವೆಂದು ಪ್ರಯುಕ್ತ ತಮ್ಮ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ನಿವೇದಿಸಿಕೊಳ್ಳುತ್ತ ತನ್ನನ್ನು ದೋಷಮುಕ್ತರನ್ನಾಗಿ ಮಾಡುವಂತೆ ಕೋರಿರುತ್ತಾರೆ. ಮತ್ತೊಬ್ಬ ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್ ರವರು ಮೇಲೆ (14)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ವಿಚಾರಣಾಧಿಕಾರಿಯನ್ನು ನೇಮಿಸಿದ ನಂತರ ತನಗೆ ದೋಷಾರೋಪಣಾ ಪಟ್ಟಿ ಹೊರಡಿಸಲಾಗಿದೆಯೆಂದು ವಿಚಾರಣಾಧಿಕಾರಿಯು ತನ್ನ ಅಹವಾಲನ್ನು ಪರಿಗಣಿಸಿಲ್ಲವೆಂದು, ಕಾರು ಚಾಲಕನನ್ನು ಪರೀಕ್ಷಿಸದಿರುವುದರಿಂದ ತನ್ನ ವಿರುದ್ಧ ಆರೋಪವು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿ ವರದಿಸಿದ್ದಾರೆಂದು, ಆರೋಪದಲ್ಲಿ ಇಲ್ಲದ ವಿಷಯವನ್ನು ವಿಚಾರಣಾಧಿಕಾರಿಯು ಪರಿಗಣಿಸಿದ್ದಾರೆಂದು, ಇತರರನ್ನು ತಪ್ಪಿತಸ್ಥರೆಂದು ಪರಿಗಣಿಸಿರುವ ವಿಚಾರಣಾಧಿಕಾರಿಯು ತನ್ನನ್ನು ಅಲ್ಲವೆಂದು, ಲಿಖಿತ ಹೇಳಿಕೆಯಲ್ಲಿ ಸಲ್ಲಿಸಿದ ಅಂಶಗಳನ್ನು ವಿಚಾರಣಾಧಿಕಾರಿಯು ಪರಿಗಣಿಸಿಲ್ಲವೆಂದು, ಸಾಕ್ಷಿಗಳು ಆರೋಪವನ್ನು ಸಮರ್ಥಿಸಿಲ್ಲವೆಂದು, ಇತರ ಆಪಾದಿತ ಸರ್ಕಾರಿ ಅಧಿಕಾರಿಗಳು ತನ್ನ ವಿರುದ್ಧದ ಆರೋಪವನ್ನು ಸಮರ್ಥಿಸಿಲ್ಲವೆಂದು, ತನ್ನ ವಿರುದ್ಧ ವಿಚಾರಣಾಧಿಕಾರಿಯನ್ನು ನೇಮಿಸಿರುವುದೇ ನಿಯಮಕ್ಕೆ ವಿರುದ್ಧವೆಂದು ಸಲ್ಲಿಸುತ್ತ ತಾನು ಯಾವುದೇ ಕರ್ತವ್ಯ ಲೋಪಗಳನ್ನು ಎಸಗಿರುವುದಿಲ್ಲವಾದ್ದರಿಂದ ತನ್ನನ್ನು ದೋಷಮುಕ್ತರನ್ನಾಗಿ ಮಾಡುವಂತೆ ಕೋರಿರುತ್ತಾರೆ.

ವಿಚಾರಣಾಧಿಕಾರಿಯು ತನ್ನ ವರದಿಯಲ್ಲಿ ಅಂಶ (ಅ) ಹಾಗೂ ಅಂಶ (ಆ) ಅನ್ನು ಫಿರ್ಯಾದುದಾರರ ವಿರುದ್ಧ ಉತ್ತರಿಸುತ್ತೇನೆಂದು ಮತ್ತು ಅಂಶ (ಇ) ಹಾಗೂ ಅಂಶ (ಈ) ಅನ್ನು ಫೀರ್ಯಾದು ಪರ ಉತ್ತರಿಸುತ್ತೇನೆಂದು ವರದಿ ಮಾಡಿರುತ್ತಾರೆ.

ಮೇಲೆ (15)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ವಿಚಾರಣಾಧಿಕಾರಿಯ ವರದಿಯನ್ನು ಒಪ್ಪಿ ಆರೋಪಗಳು ಸಾಬೀತಾಗಿರುವ ಆಪಾದಿತ ಸರ್ಕಾರಿ ಅಧಿಕಾರಿಗಳ ನಿವೃತ್ತಿ ವೇತನದಲ್ಲಿ ಶೇ.15 ರಷ್ಟು ಕಡಿತಗೊಳಿಸುವ ದಂಡನೆಯನ್ನು ವಿಧಿಸುವ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ (16)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಆಪಾದಿತ ಅಧಿಕಾರಿಗಳಾದ ಡಾ: ಪಾಂಡುರಂಗ ಶಣೈ, ವಿಧಿ ವೈದ್ಯ ಶಾಸ್ತ್ರ ಪ್ರಾಧ್ಯಾಪಕರು (ನಿವೃತ್ತ) ಮತ್ತು ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್, ವಿಧಿ ವೈದ್ಯ ಶಾಸ್ತ್ರ ಪ್ರಾಧ್ಯಾಪಕರು (ನಿವೃತ್ತ) ರವರ ನಿವೃತ್ತಿ ವೇತನದಲ್ಲಿ ಶೇ.15 ರಷ್ಟು ಮೂರು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಸಹಮತಿ ನೀಡಿರುತ್ತದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಆಪಾದಿತ ಸರ್ಕಾರಿ ಅಧಿಕಾರಿಗಳ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣಾಧಿಕಾರಿಯ ಕಂಡುಕೊಳ್ಳುವಿಕೆಯನ್ನು ಒಪ್ಪಿಕೊಂಡು ಡಾ: ಪಾಂಡುರಂಗ ಶಣೈ, ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್, ಪ್ರಾಧ್ಯಾಪಕರುಗಳು (ನಿವೃತ್ತ) ರವರ ನಿವೃತ್ತಿ ವೇತನದಲ್ಲಿ ಶೇ.15 ರಷ್ಟು ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 38 ಎಂಎಂಇ 2007, ಬೆಂಗಳೂರು, ದಿನಾಂಕ 26ನೇ ಆಗಸ್ಟ್ 2008**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ಪ್ರಕಾರ ಆಪಾದಿತ ಸರ್ಕಾರಿ ಅಧಿಕಾರಿಗಳಾದ ಡಾ: ಪಾಂಡುರಂಗ ಶಣೈ, ನಿವೃತ್ತ ವಿಧಿ ವೈದ್ಯ ಶಾಸ್ತ್ರ ಪ್ರಾಧ್ಯಾಪಕರು, ಮತ್ತು ಡಾ: ಕೆ.ಡಬ್ಲ್ಯೂ.ಡಿ ರವಿಚಂದರ್, ವಿಧಿ ವೈದ್ಯ ಶಾಸ್ತ್ರ ಪ್ರಾಧ್ಯಾಪಕರು (ನಿವೃತ್ತ) ಅಂದು ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು ಇವರ ವಿರುದ್ಧದ ಆರೋಪಗಳು ಸಾಬೀತಾಗಿದೆಯೆಂಬ ವಿಚಾರಣಾಧಿಕಾರಿಯ ವರದಿಯನ್ನು ಒಪ್ಪಿ ಅವರ ನಿವೃತ್ತಿ ವೇತನದಲ್ಲಿ ಶೇಕಡ 15(ಹದಿನೈದು)ರಷ್ಟನ್ನು ಮೂರು ವರ್ಷಗಳ ಅವಧಿಗೆ ಮಾತ್ರ ಕಡಿತಗೊಳಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1274

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ)

**ವಿಷಯ:** 2008–09ನೇ ಸಾಲಿನಲ್ಲಿ ಪ್ರಥಮ ಎಂ.ಬಿ.ಬಿ.ಎಸ್./ ಬಿ.ಡಿ.ಎಸ್. ಕೋರ್ಸಿಗೆ ಸಿ.ಇ.ಟಿ. ಯಿಂದ ಆಯ್ಕೆಯಾದ ವಿದ್ಯಾರ್ಥಿಗಳು ಪರಸ್ಪರ ವರ್ಗಾವಣೆ ಮಾಡಿಕೊಳ್ಳಲು ಅನುಮತಿ ಬಗ್ಗೆ

**ಓದಲಾಗಿದೆ:** ಪತ್ರ ಸಂಖ್ಯೆ: ಎಂಸಿಎಸ್/23/2008–09, ದಿನಾಂಕ 02–08–2008.

**ಪ್ರಸ್ತಾವನೆ:**

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ ಓದಲಾದ ತಮ್ಮ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಪ್ರಥಮ ಎಂ.ಬಿ.ಬಿ.ಎಸ್/ಬಿ.ಡಿ.ಎಸ್. ಕೋರ್ಸಿಗೆ ಸಿ.ಇ.ಟಿ. ಯಿಂದ ಆಯ್ಕೆಯಾದ ವಿದ್ಯಾರ್ಥಿಗಳು ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ಪರಸ್ಪರ ವರ್ಗಾವಣೆ ಪಡೆಯಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ 2008–09ನೇ ಸಾಲಿನಲ್ಲಿ ಪ್ರಥಮ ಎಂ.ಬಿ.ಬಿ.ಎಸ್/ ಬಿ.ಡಿ.ಎಸ್. ಕೋರ್ಸಿಗೆ ಸಿ.ಇ.ಟಿ.ಯಿಂದ ಆಯ್ಕೆಯಾದ ವಿದ್ಯಾರ್ಥಿಗಳು ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ಪರಸ್ಪರ ವರ್ಗಾವಣೆ ಪಡೆಯಲು ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 341 ಎಂಪಿಎಸ್ 2008, ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2008**

2008–09ನೇ ಶೈಕ್ಷಣಿಕ ವರ್ಷದಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆ (ಸಿ.ಇ.ಟಿ) ಮೂಲಕ ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿ ಎಂ.ಬಿ.ಬಿ.ಎಸ್. ಮತ್ತು ಬಿ.ಡಿ.ಎಸ್. ಕೋರ್ಸಿಗೆ ಅನುಕ್ರಮವಾಗಿ ಪ್ರವೇಶ ಪಡೆದಿರುವ ಅಭ್ಯರ್ಥಿಗಳು ಒಂದು ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ/ದಂತ ಕಾಲೇಜಿಗೆ ಪರಸ್ಪರ ವರ್ಗಾವಣೆ ಪಡೆಯಲು ಈ ಕೆಳಕಂಡ ನಿಬಂಧನೆ ಮತ್ತು ಷರತ್ತಿಗೊಳಪಟ್ಟು ಅನುಮತಿಯನ್ನು ನೀಡಲಾಗಿದೆ.

1. 1) ಒಂದು ಸರ್ಕಾರಿ ವೈದ್ಯಕೀಯ/ ದಂತ ಕಾಲೇಜಿನಿಂದ ಮತ್ತೊಂದು ಸರ್ಕಾರಿ ವೈದ್ಯಕೀಯ/ ದಂತ ಕಾಲೇಜಿಗೆ ಮಾತ್ರ.

   2) ಒಂದು ಖಾಸಗಿ ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ಖಾಸಗಿ ವೈದ್ಯಕೀಯ/ದಂತ ಕಾಲೇಜಿಗೆ ಮಾತ್ರ.

   3) ಪರಸ್ಪರ ವರ್ಗಾವಣೆ ಪಡೆದ ವೈದ್ಯಕೀಯ/ದಂತ ವಿದ್ಯಾರ್ಥಿಗಳು 2008–09ನೇ ಸಾಲಿನಲ್ಲಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಮುಂದಿನ ಕೌನ್ಸಿಲಿಂಗ್‌ಗೆ ಹಾಜರಾಗಲು ಅರ್ಹರಿರುವುದಿಲ್ಲ.

2. ಭಾರತೀಯ ವೈದ್ಯಕೀಯ ಪರಿಷತ್ತು (ಎಂ.ಸಿ.ಐ) ಹಾಗೂ ಭಾರತೀಯ ದಂತ ವೈದ್ಯಕೀಯ ಪರಿಷತ್ತು (ಎಂ.ಸಿ.ಐ) ಇವರು ಪರಸ್ಪರ ವರ್ಗಾವಣೆಯ ಬಗೆಗೆ ನಿಯಮಾವಳಿಗಳನ್ನು ತೀವ್ರಗೊಳಿಸಿರುವ ಹಿನ್ನೆಲೆಯಲ್ಲಿ ಸದರಿ ಪರಸ್ಪರ ವರ್ಗಾವಣೆಗಳನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಪರಿಶೀಲಿಸಿ, ಅನುಮತಿಸತಕ್ಕದ್ದು.

3. ಒಮ್ಮೆ ಪರಸ್ಪರ ವರ್ಗಾವಣೆ ಪಡೆದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ಮತ್ತೊಮ್ಮೆ ಪರಸ್ಪರ ವರ್ಗಾವಣೆಯಾಗಲೀ ಅಥವಾ ಯಾವುದೇ ಸ್ವರೂಪದ ವರ್ಗಾವಣೆಗಾಗಲೀ ಅರ್ಹರಾಗಿರುವುದಿಲ್ಲ.

4. ಪರಸ್ಪರ ವರ್ಗಾವಣೆಯನ್ನು ಪಡೆಯುವ ಪ್ರತಿಯೊಬ್ಬ ಅಭ್ಯರ್ಥಿಯು ಅವರ ಸ್ವಂತ ಜವಾಬ್ದಾರಿಯ ಮೇಲೆ (At their own risk) ಒಂದು ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ/ದಂತ ಕಾಲೇಜಿಗೆ ದಿನಾಂಕ 23–09–2008ಕ್ಕೆ ಮೊದಲು ಪುನರ್ ಸೇರತಕ್ಕದ್ದು. ಇದಕ್ಕೆ ಪೂರಕವಾಗಿ ಪ್ರತಿಯೊಬ್ಬ ಅಭ್ಯರ್ಥಿಯು ಎರಡು ಸಾಕ್ಷಿಗಳ ಸಮೇತ ಮುಚ್ಚಳಿಕೆಯನ್ನು ಸಲ್ಲಿಸತಕ್ಕದ್ದು.

5. ಪರಸ್ಪರ ವರ್ಗಾವಣೆ ಬಯಸುವ ಪ್ರತಿಯೊಬ್ಬ ಅಭ್ಯರ್ಥಿಯು ಹಾಲಿ ವ್ಯಾಸಂಗ ಮಾಡುತ್ತಿರುವ ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರಿಂದ ಹಾಗೂ ಯಾವ ವೈದ್ಯಕೀಯ ಕಾಲೇಜಿಗೆ ವರ್ಗಾವಣೆ ಬಯಸಿದ್ದಾರೆಯೋ ಅಂತಹ ಕಾಲೇಜಿನ ಪ್ರಾಂಶುಪಾಲರಿಂದ ನಿರಾಕ್ಷೇಲಪಣಾ ಪತ್ರವನ್ನು ಲಿಖಿತವಾಗಿ ಪಡೆಯಬೇಕು. ಕಾಲೇಜಿನ ಪ್ರವೇಶದಲ್ಲಿ ಯಾವುದೇ ಅಡಚಣೆಯಾದಲ್ಲಿ ಅದಕ್ಕೆ ವಿದ್ಯಾರ್ಥಿಗಳೇ ವೈಯುಕ್ತಿಕವಾಗಿ ಜವಾಬ್ದಾರರಾಗಿರುತ್ತಾರೆ.

6. ಪರಸ್ಪರ ವರ್ಗಾವಣೆ ಬಯಸುವ ಅಭ್ಯರ್ಥಿಗಳ ವರ್ಗಾವಣೆಯನ್ನು ದಿನಾಂಕ 23–09–2008ಕ್ಕೆ ಮೊದಲು ಅಂತಿಮಗೊಳಿಸಬೇಕು ಮತ್ತು ದಿನಾಂಕ 23–09–2008ರ ಒಳಗಾಗಿ ವರ್ಗಾವಣೆಗೊಂಡ ಅಭ್ಯರ್ಥಿಗಳು ಸಂಬಂಧಿಸಿದ ಕಾಲೇಜಿಗೆ ಸೇರತಕ್ಕದ್ದು. ಯಾವುದೇ ಕಾರಣಕ್ಕೂ ಪರಸ್ಪರ ವರ್ಗಾವಣೆ ಕಾಲಮಿತಿಯನ್ನು ವಿಸ್ತರಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1216

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ)

## ಆರ್ಥಿಕ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯಲ್ಲಿ ಅಬಕಾರಿ ಅಕ್ರಮಗಳು ಹೆಚ್ಚಾಗಿದ್ದು, ಸ್ಥಳೀಯ ಅಧಿಕಾರಿ/ಸಿಬ್ಬಂದಿ ಕರ್ತವ್ಯಲೋಪದ ಬಗ್ಗೆ ಹಾಗೂ ಗುಲ್ಬರ್ಗಾ ಜಿಲ್ಲೆಯಲ್ಲಿ ಹಿಂದಿನ ಅಬಕಾರಿ ಉಪ ಆಯುಕ್ತರಾಗಿದ್ದ ಶ್ರೀ ತಿಪ್ಪಣ್ಣ ಬಿ. ಕೊಂಡಾಪುರ್ ಮತ್ತು ಶ್ರೀ ಎ.ಎಸ್. ಮಂಗಾಣಿ, ಅಬಕಾರಿ ಅಧೀಕ್ಷಕರು, ಗುಲ್ಬರ್ಗಾ ಅಬಕಾರಿ ಜಂಟಿ ಆಯುಕ್ತರ ಕಛೇರಿ, ಗುಲ್ಬರ್ಗಾ ರವರುಗಳನ್ನು ಕರ್ತವ್ಯಲೋಪಕ್ಕಾಗಿ ಅಮಾನತ್ತಿನಲ್ಲಿ ಇಡುವ ಬಗ್ಗೆ.

**ಓದಲಾಗಿದೆ:**
1. ಅಬಕಾರಿ ಆಯುಕ್ತರು ಸರ್ಕಾರಕ್ಕೆ ಬರೆದಿರುವ ಪತ್ರ ಸಂಖ್ಯೆ: ಇಸಿಇ 13 ಡಿಎಸ್‌ಸಿ (2) 2008, ದಿನಾಂಕ 4–10–2008.
2. ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಗುಲ್ಬರ್ಗಾ ವಿಭಾಗ ಇವರ ವರದಿ ಸಂಖ್ಯೆ: ಜೆಸಿಇ/ಆಡಳಿತ/08–09, ದಿನಾಂಕ 3–10–2008.

**ಪ್ರಸ್ತಾವನೆ :**

ಉಲ್ಲೇಖಿತ ಪತ್ರಗಳಲ್ಲಿ ಗುಲ್ಬರ್ಗಾ ಜಿಲ್ಲೆಯ ಆಳಂದ, ಚಿಂಚೋಳಿ, ಅಫಜಲ್‌ಪುರ ಮತ್ತು ಯಾದಗಿರಿ ವಲಯ/ತಾಲ್ಲೂಕುಗಳಲ್ಲಿ ಅಕ್ರಮ ಅಬಕಾರಿ ಚಟುವಟಿಕೆಗಳು ನಡೆಯುತ್ತಿರುವ ಬಗ್ಗೆ ಅಲ್ಲಿನ ಸ್ಥಳೀಯ ಅಬಕಾರಿ ಅಧಿಕಾರಿಗಳು/ಸಿಬ್ಬಂದಿ ವರ್ಗದವರು ಸೂಕ್ತ ಕ್ರಮ ಜರುಗಿಸದೇ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಕರ್ತವ್ಯಲೋಪವೆಸಗಿರುವ ಬಗ್ಗೆ ವರದಿ ಮಾಡಲಾಗಿರುತ್ತದೆ.

ಮೇಲ್ಕಂಡಂತೆ ತಿಳಿಸಿರುವಂತೆ, ಅಕ್ರಮ ಚಟುವಟಿಕೆಗಳ ವರದಿಯನ್ನು ಗಮನಿಸಿದಾಗ ಇಂತಹ ಅಕ್ರಮ ಚಟುವಟಿಕೆಗಳು ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿದ್ದು, ಇದಕ್ಕೆ ಅಂದಿನ ಅಧಿಕಾರಿಗಳು ಸೂಕ್ತ ಕ್ರಮ ಜರುಗಿಸದೇ ಇರುವುದೂ ಸಹಾ ವೇದ್ಯವಾಗುತ್ತದೆ. ಶ್ರೀ ಎ.ಎಸ್. ಮಂಗಾಣಿ ಇವರು ಗುಲ್ಬರ್ಗಾ ಜಿಲ್ಲೆಯ ಅಬಕಾರಿ ಅಧೀಕ್ಷಕರಾಗಿ ದಿನಾಂಕ 18–1–2006 ರಿಂದ 31–3–2008ರ ವರೆಗೆ ಕೆಲಸ ನಿರ್ವಹಿಸಿದ್ದು, ಈ ಅವಧಿಯಲ್ಲಿ ಇವರು ಜಿಲ್ಲೆಯ ಜಾರಿ ಮತ್ತು ತನಿಖೆಯ ಮುಖ್ಯಸ್ಥರಾಗಿ (EIB ಮುಖ್ಯಸ್ಥರು) ಕೆಲಸ ನಿರ್ವಹಿಸಿರುತ್ತಾರೆ. ತದನಂತರ ಸದರಿ ಅಧಿಕಾರಿಗಳು, ಅದೇ ಜಿಲ್ಲೆಯಲ್ಲಿ ಜಂಟಿ ಆಯುಕ್ತರ ಕಛೇರಿಯ ಕೇಂದ್ರಸ್ಥಾನದ ಅಧೀಕ್ಷಕರಾಗಿ ಕೆಲಸ ನಿರ್ವಹಿಸಿದ್ದು, ಜಿಲ್ಲೆಯ ಜಾರಿ ಮತ್ತು

ತನಿಖೆಯ ವಿಚಾರಗಳಿಗೆ ಸಂಬಂಧಿಸಿದವರಾಗಿದ್ದು, ಈ ಜಿಲ್ಲೆಯಲ್ಲಿನ ನ್ಯೂನತೆಗಳಿಗೆ ಕಛೇರಿಯ ಜಂಟಿ ಆಯುಕ್ತರಿಗೆ ಸೂಕ್ತ ಮಾಹಿತಿ ಹಾಗೂ ವರದಿ ನೀಡಿ ಚಟುವಟಿಕೆಗಳನ್ನು ಹತ್ತಿಕ್ಕುವ ಕೆಲಸ ನಿರ್ವಹಿಸಬೇಕಾಗಿತ್ತು.

ಶ್ರೀ ಟಿ.ಬಿ. ಕೊಂಡಾಪುರ್, ಅಬಕಾರಿ ಉಪ ಆಯುಕ್ತರು ಇವರು 2005 ರಿಂದ ಆಗಸ್ಟ್–2008ರ ವರೆಗೆ ಅಬಕಾರಿ ಉಪ ಆಯುಕ್ತರಾಗಿ ಸದರಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ 152 ಇಡಿಸಿ 2008(2), ದಿನಾಂಕ 29–8–2008ರ ಆದೇಶದಂತೆ ಬಳ್ಳಾರಿ ಜಿಲ್ಲೆಗೆ ವರ್ಗಾವಣೆಗೊಂಡಿರುತ್ತಾರೆ. ಇವರು ಗುಲ್ಬರ್ಗಾ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಮೇಲ್ಕಂಡಂತೆ ತಿಳಿಸಿರುವಂತೆ ಅಕ್ರಮ ಚಟುವಟಿಕೆಗಳು ನಡೆಯದಂತೆ ಕಾರ್ಯನಿರ್ವಹಿಸಬೇಕಾಗಿತ್ತು. ಈ ಕರ್ತವ್ಯದಲ್ಲಿ ಇವರು ವಿಫಲರಾಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ.

ಗುಲ್ಬರ್ಗಾ ಜಿಲ್ಲೆಯಲ್ಲಿ ಅಕ್ರಮ ಸಾರಾಯಿ ಮಾರಾಟ ಸಮಸ್ಯೆ ವ್ಯಾಪಕವಾಗಿದ್ದರೂ ಜನವರಿ 2008ರಿಂದ ಏಪ್ರಿಲ್ 2008ರ ಅವಧಿಯಲ್ಲಿ ಕೇವಲ 276 ಲೀಟರ್ ಸಾರಾಯಿ ಜಪ್ತು ಮಾಡಿರುವುದನ್ನು ಗಮನಿಸಿದಾಗ ಈ ಜಿಲ್ಲೆಯ ನಿಯಂತ್ರಣಾಧಿಕಾರಿಗಳು ತಮ್ಮ ಕರ್ತವ್ಯದಲ್ಲಿ ವಿಫಲರಾಗಿರುವುದು ಸ್ಪಷ್ಟವಾಗುತ್ತದೆ. ಗುಲ್ಬರ್ಗಾ ಜಿಲ್ಲೆಯ ಆಳಂದ ಮತ್ತು ಅಫಜಲ್‌ಪುರ್ ತಾಲ್ಲೂಕುಗಳಲ್ಲಿ ಅಕ್ರಮವಾಗಿ ಸಾರಾಯಿ ಮಾರಾಟ ಮಾಡಲು ಅವಕಾಶ ಮಾಡಿಕೊಟ್ಟಿರುವ ಬಗ್ಗೆ ಅನೇಕ ದೂರುಗಳು ಬಂದಿರುತ್ತದೆ.

ಗುಲ್ಬರ್ಗಾ ಜಿಲ್ಲೆಯಲ್ಲಿ ಈ ಹಿಂದೆ ಕರ್ತವ್ಯ ನಿರ್ವಹಿಸಿದ ಅಬಕಾರಿ ಅಧೀಕ್ಷರಾದ ಶ್ರೀ ಎ.ಎಸ್. ಮಂಗಾಣಿ ಹಾಗೂ ಶ್ರೀ ಟಿ.ಬಿ. ಕೊಂಡಾಪುರ ಅಬಕಾರಿ ಉಪ ಆಯುಕ್ತರು ಇವರುಗಳನ್ನು ಮೇಲಿನ ನ್ಯೂನತೆಗಳಿಗಾಗಿ ಕೂಡಲೇ ಅಮಾನತ್ತಿನಲ್ಲಿಡಲು ಅಬಕಾರಿ ಆಯುಕ್ತರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ಆಯುಕ್ತರ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಇವರುಗಳ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರಂತೆ ಸೂಕ್ತ ಶಿಸ್ತು ಕ್ರಮ ತೆಗೆದುಕೊಳ್ಳುವುದನ್ನು ಕಾಯ್ದಿರಿಸಿ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯಕವೆಂದು ಸರ್ಕಾರವು ತೀರ್ಮಾನಿಸಿದೆ.

ಆದ್ದರಿಂದ, ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಇ 192 ಇಪಿಎಸ್ 2008, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2008.**

ಮೇಲ್ಕಂಡ ಸನ್ನಿವೇಶದಲ್ಲಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ತಿಪ್ಪಣ್ಣ ಬಿ ಕೊಂಡಾಪುರ್, ಅಬಕಾರಿ ಉಪ ಆಯುಕ್ತರು, ಬಳ್ಳಾರಿ ಮತ್ತು ಶ್ರೀ ಎ.ಎಸ್. ಮಂಗಾಣಿ ಅಬಕಾರಿ ಅಧೀಕ್ಷಕರು, ಗುಲ್ಬರ್ಗಾ ಅಬಕಾರಿ ಜಂಟಿ ಆಯುಕ್ತರ ಕಛೇರಿ, ಗುಲ್ಬರ್ಗಾ ರವರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿಲ್ಲಿರಿಸಿದೆ.

ಈ ಅವಧಿಯಲ್ಲಿ ಶ್ರೀ ತಿಪ್ಪಣ್ಣ ಬಿ. ಕೊಂಡಾಪುರ್, ಅಬಕಾರಿ ಉಪ ಆಯುಕ್ತರು, ಬಳ್ಳಾರಿ ಮತ್ತು ಶ್ರೀ ಎ.ಎಸ್. ಮಂಗಾಣಿ ಅಬಕಾರಿ ಅಧೀಕ್ಷಕರು, ಗುಲ್ಬರ್ಗಾ ಅಬಕಾರಿ ಜಂಟಿ ಆಯುಕ್ತರ ಕಛೇರಿ, ಗುಲ್ಬರ್ಗಾ ಇವರುಗಳು ಕರ್ನಾಟಕ ನಾಗರೀಕ ಸೇವಾ ನಿಯಮಗಳ, ನಿಯಮ 98ರಂತೆ ಲಭ್ಯವಿರುವ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಅಮಾನತ್ತಿನ ಅವಧಿಯಲ್ಲಿ ಇವರುಗಳು ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1491

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಅಬಕಾರಿ)

## ಕಂದಾಯ ಸಚಿವಾಲಯ

**ವಿಷಯ :** ಬಸವಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ :**

ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2250–00–103–2–00–101–ಸಹಾಯಾನುದಾನ (ಯೋಜನೆ) ಅಡಿಯಲ್ಲಿ ರೂ. 20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಗೆ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2008.**

ಸರ್ಕಾರವು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ "2250–00–103–2–00–101 ಸಹಾಯಾನುದಾನ (ಯೋಜನೆ)" ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ ರೂ. 1,00,00,000.00 ಗಳನ್ನು (ಒಂದು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಮಂಜೂರು ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2. ಈ ಹಣವನ್ನು ಅನುದಾನದ ಬಿಲ್ಲಿನ ಮೂಲಕ ಡ್ರಾ ಮಾಡುವುದು.
3. ಸರ್ಕಾರದ ಉಪ ಕಾರ್ಯದರ್ಶಿಗಳು (ಭೂಸ್ವಾಧೀನ ಮತ್ತು ಪುನರ್ವಸತಿ) ಕಂದಾಯ ಇಲಾಖೆ ಇವರು ಮೇಲು ರುಜು ಮಾಡಿದ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.
4. ಈ ಅನುದಾನದ ಚೆಕ್ಕನ್ನು ಆಯುಕ್ತರು, ಬಸವಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವಕಲ್ಯಾಣ, ಬೀದರ್ ಜಿಲ್ಲೆ ಇವರ ಹೆಸರಿನಲ್ಲಿ ನೀಡುವುದು.

ಈ ಆದೇಶವನ್ನು ಸರ್ಕಾರಿ ಅದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ 12–6–2003 ರನ್ವಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1394

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪುನರ್ವಸತಿ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಸಂವಾಪ್ರ 72 ಕಸನಿ 2008, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2008.**

ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಗೆ ಸಿಬ್ಬಂದಿಗಳನ್ನು ನೇಮಕ ಮಾಡಲು ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ: "ಸಂಕಇ 21 ಕೆಒಎಲ್ 2008, ದಿನಾಂಕ 23–9–2008" ಅನ್ನು "ಕಸಂವಾಪ್ರ 72 ಕಸನಿ 2008, ದಿನಾಂಕ 23–9–2008" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1593

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಕೆ.ಎಂ. ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2) ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣೆಯ ಮೇರೆಗೆ ಸದರಿಯವರಿಗೆ ಕಠಿಣ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ಇವರ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ ಆಡಳಿತ (2)/34/1998–99, ದಿನಾಂಕ 29–2–2000.
2. ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ಇವರ ಮುಂದುವರೆದ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಆಡಳಿತ(2)/84/1998–99, ದಿನಾಂಕ 7–8–2000.
3. ಮೀನುಗಾರಿಕೆ ನಿರ್ದೇಶಕರ ಕಛೇರಿ ಆದೇಶ ಸಂಖ್ಯೆ: ಆಡಳಿತ(2)/84/1998–99, ದಿನಾಂಕ 20–12–2001.
4. ಮೀನುಗಾರಿಕೆ ನಿರ್ದೇಶಕರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಆಡಳಿತ(2)/84/1998–99, ದಿನಾಂಕ 22–3–2003.

5. ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ ಆಡಳಿತ(2)/84/1998-99, ದಿನಾಂಕ 10-11-2003.
6. ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಪಸಂಮೀ/241/ಮೀಇಸೇ/2003, ದಿನಾಂಕ 6-6-2005.
7. ಆರೋಪಿತ ಅಧಿಕಾರಿಯವರ ಲಿಖಿತ ಹೇಳಿಕೆ ದಿನಾಂಕ 18-7-2005.
8. ಸರ್ಕಾರದ ಹಿಂಬರಹ ಸಂಖ್ಯೆ: ಪಸಂಮೀ/241/ಮೀಇಸೇ/2003, ದಿನಾಂಕ 29-8-2005.
9. ಆರೋಪಿತ ಅಧಿಕಾರಿಯವರ ಮನವಿ ಪತ್ರ ದಿನಾಂಕ 19-9-2005.
10. ಸರ್ಕಾರದ ಹಿಂಬರಹ ಸಂಖ್ಯೆ: ಪಸಂಮೀ/241/ಮೀಇಸೇ/2003, ದಿನಾಂಕ 26-11-2005.
11. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಇವರ ಪತ್ರ ಸಂಖ್ಯೆ: ಪಿಎಸ್‌ಸಿ/126/ಸಿಎನ್‌ಎಸ್/2006, ದಿನಾಂಕ 6-12-2006.
12. ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ಆಡಳಿತ(2)/49/2004-05, ದಿನಾಂಕ 29-5-2008.

**ಪ್ರಸ್ತಾವನೆ :**

ಈ ಪ್ರಕರಣದ ಆಪಾದಿತ ಅಧಿಕಾರಿಯವರಾದ ಶ್ರೀ ಕೆ.ಎಂ. ರೇಣುಕಾರಾಧ್ಯ, ಪ್ರಸ್ತುತ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರು ಹಿಂದೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಕೂಡ್ಲಿಗಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 1996-97, 97-98 ಮತ್ತು 98-99ನೇ ಸಾಲಿನಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಹಡಗಲಿ ಮತ್ತು ಹರಪನಹಳ್ಳಿ ಈ ಹುದ್ದೆಗಳ ಅಧಿಕ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೆರೆಗಳ ಮೀನು ಪಾಶುವಾರು ಹಕ್ಕು ವಿಲೇವಾರಿ ಮಾಡಿ ಹಣ ವಸೂಲು ಮಾಡದಿರುವುದು, ಮೀನುಮರಿ ಸಾಲದ ರೂಪದಲ್ಲಿ ವಿತರಣೆ ಮಾಡಿ, ಮೀನುಮರಿ ಮೌಲ್ಯವನ್ನು ವಸೂಲು ಮಾಡದಿರುವುದು ಹಾಗೂ ಡಿ.ಡಿ. ಹಣವನ್ನು, ನಗದೀಕರಿಸಿ ದುರುಪಯೋಗಪಡಿಸಿಕೊಂಡಿರುವುದು, ಇತ್ಯಾದಿ ದೋಷಾರೋಪಣೆಗಳ ಕುರಿತು ಅವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣಾ ವರದಿಯ ಆಧಾರದಲ್ಲಿ ಅವರಿಗೆ ಕಠಿಣ ದಂಡನೆಯನ್ನು ವಿಧಿಸುವಂತೆ ಕೋರಿ ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಪ್ರಕರಣದ ಹಿನ್ನೆಲೆ:**

2) ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11ರನ್ವಯ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದೋಷಾರೋಪಣಾ ಪಟ್ಟಿಯೊಂದಿಗೆ ದಿನಾಂಕ 29-2-2000ರಲ್ಲಿ ಜಾರಿ ಮಾಡಿ ಸದರಿ ಆಪಾದಿತ ಅಧಿಕಾರಿಯ ವಿರುದ್ಧ 06 ಆರೋಪಗಳನ್ನು ಹೊರಿಸಲಾಗಿತ್ತು. ತದನಂತರ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 7-8-2000ರ ಮುಂದುವರೆದ ಮತ್ತೊಂದು ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ಮತ್ತೆ 02 ಆರೋಪಗಳನ್ನು ಹೀಗೆ ಸದರಿಯವರ ವಿರುದ್ಧ ಒಟ್ಟು 08 ದೋಷಾರೋಪಣೆಗಳನ್ನು ಹೊರಿಸಿ ಈ ಬಗ್ಗೆ ಅವರ ಲಿಖಿತ ಸಮಜಾಯಿಷಿ ಸಲ್ಲಿಸುವಂತೆ ಸೂಚಿಸಿರುತ್ತಾರೆ. ಈ ಎರಡೂ ನೋಟೀಸ್‌ಗೂ ಆಪಾದಿತ ಅಧಿಕಾರಿಯವರು ಯಾವುದೇ ಉತ್ತರವನ್ನು ನೀಡಿರುವುದಿಲ್ಲವಾದ್ದರಿಂದ, ಇವರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಇಲಾಖಾ ವಿಚಾರಣೆ ಮೂಲಕ ತಿಳಿಯಲು ಮೀನುಗಾರಿಕೆ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕಛೇರಿ ಆದೇಶ ಸಂಖ್ಯೆ: ಆಡಳಿತ/2/84/1998-99, ದಿನಾಂಕ 20-12-2001ರಲ್ಲಿ ಶ್ರೀ ಎ.ಎನ್. ಕುಮಾರ್, ಆಗಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಹಗರಿಬೊಮ್ಮನಹಳ್ಳಿ, ಇವರನ್ನು 'ವಿಚಾರಣಾಧಿಕಾರಿ'ಯನ್ನಾಗಿ ಹಾಗೂ ಶ್ರೀ ಆರ್.ಸಿ. ಇವಣಗಿ, ಪ್ರಥಮ ದರ್ಜೆ ಸಹಾಯಕರು, ಮೀನುಗಾರಿಕೆ ಉಪ ನಿರ್ದೇಶಕರ ಕಛೇರಿ, ಬಳ್ಳಾರಿ, ಇವರನ್ನು ಮಂಡನಾಧಿಕಾರಿಯನ್ನಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(2) ಮತ್ತು 5(ಸಿ)ರನ್ವಯ ನೇಮಕ ಮಾಡಿರುತ್ತಾರೆ.

3) ವಿಚಾರಣಾಧಿಕಾರಿಗಳು, ಈ ಪ್ರಕರಣದ ವಿಚಾರಣೆಯನ್ನು ಕೈಗೊಂಡಿರುತ್ತಾರೆ. ವಿಚಾರಣಾಧಿಕಾರಿಗಳು, ವಿಚಾರಣೆಯ ಸಮಯದಲ್ಲಿ ಆಪಾದಿತರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿ ವಿಚಾರಣೆಗೆ ಹಾಜರಾಗುವಂತೆ ಸೂಚಿಸಿದ್ದರೂ ಸಹ ಅವರು ಇದಕ್ಕೆ ಸ್ಪಂದಿಸದೆ ವಿಚಾರಣೆಗೆ ಗೈರು ಹಾಜರಾಗಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11(20)ರ ಪ್ರಕಾರ ಆರೋಪಿ ಅಧಿಕಾರಿಯ ಗೈರುಹಾಜರಿಯಲ್ಲಿ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳು ತೀರ್ಮಾನಿಸಿ ಅದರಂತೆ ವಿಚಾರಣೆಯನ್ನು ಕೈಗೊಂಡಿರುತ್ತಾರೆ. ವಿಚಾರಣೆಯ ಸಮಯದಲ್ಲಿ ಹಾಜರುಪಡಿಸಿದ ದಾಖಲೆಗಳು, ಮಂಡನಾಧಿಕಾರಿಗಳು ಮಂಡಿಸಿದ ವಾದ ಹಾಗೂ ಆರೋಪ ಪರ ಸಾಕ್ಷಿಗಳ ಹೇಳಿಕೆಗಳು, ಇತ್ಯಾದಿ ಪರಿಶೀಲಿಸಿ ಆರೋಪಿತರ ಮೇಲೆ ಹೊರಿಸಲಾಗಿರುವ ಎಲ್ಲಾ 08 ಆರೋಪಗಳು

ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತೀರ್ಮಾನಿಸಿರುತ್ತಾರೆ. ವಿಚಾರಣೆಯಲ್ಲಿ ಸಾಬೀತಾಗಿರುವ 08 ಆರೋಪಗಳು ಸಂಕ್ಷಿಪ್ತವಾಗಿ ಈ ಕೆಳಗಿನಂತಿವೆ:

**ಆರೋಪ ಸಂಖ್ಯೆ: 1** ಆಪಾದಿತ ಅಧಿಕಾರಿಯಾದ ಶ್ರೀ ಕೆ.ಎಂ. ರೇಣುಕಾರಾಧ್ಯ ಇವರು ಹಿಂದೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿ, ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಹರಪನಹಳ್ಳಿ ಹಾಗೂ ಹಡಗಲಿ ತಾಲ್ಲೂಕುಗಳ ಅಧಿಕ ಪ್ರಭಾರ ವಹಿಸಿಕೊಂಡು ಕಾರ್ಯನಿರ್ವಹಿಸಿದ ಅವಧಿಯಲ್ಲಿ 1996–97, 1997–98 ಮತ್ತು 1998–99ನೇ ಸಾಲಿನಲ್ಲಿ ಕೆರೆಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಿಸಿದಂತೆ ಕೆಳ ಕಾಣಿಸಿದ ಒಟ್ಟು ರೂ. 61,134–00ಗಳ ನಷ್ಟಕ್ಕೆ ಜವಾಬ್ದಾರರಾಗಿರುತ್ತಾರೆ.

| | | |
|---|---|---|
| 1) | ವಸೂಲು ಮಾಡದೇ ಇರುವ ಕೆರೆಗಳ ಗುತ್ತಿಗೆ ಹಣದ ಬಾಬ್ತು | ರೂ. 4,119–00 |
| 2) | ನವೀಕರಿಸದೇ ಇರುವ ಕೆರೆಗಳ ಗುತ್ತಿಗೆ ಹಣದ ಬಾಬ್ತು | ರೂ. 3,750–00 |
| 3) | ವಿಲೇವಾರಿ ಮಾಡದ ಕೆರೆಗಳ ಗುತ್ತಿಗೆ ಹಣದ ಬಾಬ್ತು | ರೂ. 7,695–00 |
| 4) | ಕೆರೆಯನ್ನು ವಿಲೇವಾರಿ ಮಾಡಿ ಪ್ರಸ್ತಾವನೆಯನ್ನು ಸಲ್ಲಿಸದಿರುವ ಗುತ್ತಿಗೆ ಹಣದ ಬಾಬ್ತು | ರೂ. 45,570–00 |
| | **ಒಟ್ಟು** | **ರೂ. 61,134–00** |

**ಆರೋಪ ಸಂಖ್ಯೆ 2** ಆಪಾದಿತ ಅಧಿಕಾರಿಯು 1997–98ನೇ ಸಾಲಿನಲ್ಲಿ ಕೂಡ್ಲಗಿ ತಾಲ್ಲೂಕಿನಲ್ಲಿ ಕೆರೆಗಳನ್ನು ವಿಲೇವಾರಿ ಮಾಡಿದಾಗ ದಿನಾಂಕ 25–9–1997ರಂದು ಹರಾಜು ಪ್ರಕಟಣೆಯ ಕ್ರಮ ಸಂಖ್ಯೆ 25ರಲ್ಲಿನ ಗುಂಡುಮುಣುಗು ದೊಡ್ಡ ಕೆರೆಯನ್ನು ಹರಾಜು ಮಾಡಿದ ಹರಾಜು ಪಟ್ಟಿಗಳನ್ನು ಎರಡೆರಡು ತಯಾರಿಸಿ ಎರಡು ಪಟ್ಟಿಗಳಲ್ಲಿ ಒಂದನ್ನು ಸಂದರ್ಭಾನುಸಾರ ಉಪಯೋಗಿಸಿಕೊಂಡು ಸರ್ಕಾರಕ್ಕೆ ಮೋಸ ಮಾಡುವ ದುರುದ್ದೇಶದಿಂದ ಸಹಿ ಮಾಡಿರುವುದಿಲ್ಲ.

**ಆರೋಪ ಸಂಖ್ಯೆ 3** ಆಪಾದಿತ ಅಧಿಕಾರಿಯು 1996–97ನೇ ಸಾಲಿನಲ್ಲಿ ಕೂಡ್ಲಗಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹರಪನಹಳ್ಳಿ ಮತ್ತು ಹಡಗಲಿ ತಾಲ್ಲೂಕುಗಳ ಅಧಿಕ ಪ್ರಭಾರವನ್ನು ವಹಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದಾಗ, ಜಿಲ್ಲಾ ಪಂಚಾಯತ್ ಯೋಜನೆಯಾದ ಮೀನುಮರಿ ಉತ್ಪಾದನೆ, ಸಾಕಣೆ ಮತ್ತು ಹಂಚಿಕೆಯಲ್ಲಿ ವಿವಿಧ ಮೀನುಮರಿ ಉತ್ಪಾದನೆ ಕೇಂದ್ರಗಳಿಂದ ಮೀನುಮರಿಗಳನ್ನು ಖರೀದಿಸಿ ಡಿ.ಸಿ. ಬಿಲ್‌ಗಳ ಮೂಲಕ ಹಣ ನಗದೀಕರಿಸಿ ಸಂಬಂಧಿತ ಮೀನುಮರಿ ಕೇಂದ್ರಗಳಿಗೆ ಹಣ ಪಾವತಿ ಮಾಡಿ ಖರೀದಿಸಲಾದ ಒಟ್ಟು ರೂ. 1,45,509–00ಗಳ ಮೌಲ್ಯದ ಮೀನುಮರಿಗಳನ್ನು, ಸಾಲದ ರೂಪದಲ್ಲಿ ಕೊಡಬಾರದೆಂಬ ಸೂಚನೆಯಿದ್ದರೂ ಸಹ ಸಾಲದ ರೂಪದಲ್ಲಿ ವಿತರಿಸಿ ಈ ಹಣವನ್ನು ಸಂಬಂಧಪಟ್ಟ ಮೀನು ಕೃಷಿಕರಿಂದ ವಸೂಲು ಮಾಡಿ ಸರ್ಕಾರಕ್ಕೆ ಜಮಾ ಮಾಡಿರುವ ಬಗ್ಗೆ ದಾಖಲೆಗಳು ಇರುವುದಿಲ್ಲ. ಅಲ್ಲದ ಕೊಂಡಜ್ಜಿ ಮೀನುಮರಿ ಕೇಂದ್ರದಿಂದ ರೂ. 42,760–00ಗಳ ಮೌಲ್ಯದ ಮೀನುಮರಿಗಳನ್ನು ಸಾಲದ ರೂಪದಲ್ಲಿ ನೇರವಾಗಿ ಖರೀದಿಸಿ ಮಾರಾಟ ಮಾಡಿ ಸದರಿ ಹಣ ರೂ. 42,760–00ಗಳನ್ನು ಕೊಂಡಜ್ಜಿ ಮೀನುಮರಿ ಉತ್ಪಾದನಾ ಕೇಂದ್ರಕ್ಕೆ ಪಾವತಿ ಮಾಡಿರುವುದಿಲ್ಲ.

**ಆರೋಪ ಸಂಖ್ಯೆ 4** ಆಪಾದಿತ ಅಧಿಕಾರಿಯು ಹರಪನಹಳ್ಳಿ ತಾಲ್ಲೂಕಿನ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೆರೆಗಳನ್ನು ವಿಲೇವಾರಿ ಮಾಡಿದ್ದು ಅದರಲ್ಲಿ ನಾಗಲಾಪುರ ಕೆರೆಯನ್ನು ವಿಲೇವಾರಿ ಮಾಡದೇ ಶ್ರೀ ಭೀಮನಗೌಡ ತಂದೆ ಸೋಮನಗೌಡ, ರಾಗಿಮಸಲವಾಡ, ಹರಪನಹಳ್ಳಿ ಅವರಿಂದ ಕೆರೆಯ ಬಾಬ್ತು ರೂ. 985–00ಗಳನ್ನು ಹಾಗೂ ಮೀನುಮರಿ ಸರಬರಾಜು ಮಾಡುವ ಬಗ್ಗೆ ರೂ. 1,015–00ಗಳನ್ನು ಪಡೆದು ದುರುಪಯೋಗಪಡಿಸಿಕೊಂಡಿದ್ದಾರೆ.

**ಆರೋಪ ಸಂಖ್ಯೆ 5** ಆಪಾದಿತ ಅಧಿಕಾರಿಯು ಕೂಡ್ಲಗಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರಾಜ್ಯ ವಲಯದ ಜಲಸಿರಿ ಯೋಜನೆಯನ್ನು ಕೂಡ್ಲಗಿ ಮತ್ತು ಹೆಚ್.ಬಿ. ಹಳ್ಳಿ ತಾಲ್ಲುಕುಗಳಲ್ಲಿ ಅನುಷ್ಠಾನಗೊಳಿಸಲು ಒಟ್ಟು ರೂ. 20,000–00ಗಳನ್ನು ದಿನಾಂಕ 29–3–1996ರಂದು ಖಜಾನೆಯಿಂದ ನಗದೀಕರಿಸಿಕೊಂಡು ಯೋಜನೆಯನ್ನು ಅನುಷ್ಠಾನಗೊಳಿಸಿದ ಬಗ್ಗೆ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಬಳ್ಳಾರಿ, ಇವರಿಗೆ ಯಾವುದೇ ಮಾಹಿತಿಯನ್ನು ಮತ್ತು ಉಪಯುಕ್ತತಾ ಪ್ರಮಾಣ ಪತ್ರವನ್ನು ಸಲ್ಲಿಸದೆ ಅಧಿಕಾರ ದುರುಪಯೋಗಪಡಿಸಿಕೊಂಡು ಯೋಜನೆ ಅನುಷ್ಠಾನಗೊಳಿಸಲು ವಿಫಲರಾಗಿದ್ದಾರೆ.

**ಆರೋಪ ಸಂಖ್ಯೆ 6** ಆಪಾದಿತ ಅಧಿಕಾರಿಯು ದಿನಾಂಕ 26–7–1995ರಂದು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿ ಕಛೇರಿಗೆ ಹಾಜರಾದಾಗ ಸದರೀ ಕಛೇರಿಯಲ್ಲಿ ದಿನಾಂಕ 28–2–1995ರಂದು

ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ ಶ್ರೀ ಮಹಮ್ಮದ್ ಇಸಾಕ್ ಅವರಿಂದ ಸರ್ಕಾರಕ್ಕೆ ಬರಬೇಕಾದ ಹಣವನ್ನು ಅವರ ನಿವೃತ್ತಿ ವೇತನ ಭಾಗದಿಂದ ಆಗಿನ ಸಮಯದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿ, ರವರು ಕಡಿತ ಮಾಡಿದ ರೂ. 30,000–00ಗಳಲ್ಲಿ ರೂ. 4,101–35ಗಳನ್ನು ಮೀನುಗಾರಿಕೆ ಸಹಕಾರ ಸಂಘ, ವಿ.ವಿ. ಸಾಗರ, ಇವರಿಗೆ ಪಾವತಿ ಮಾಡಲು ಡಿ.ಡಿ. ತೆಗೆದು ಈ ಡಿ.ಡಿ.ಯು ವಾಪಸ್ಸು ಬಂದಿದ್ದು, ಪತ್ರವ್ಯವಹಾರದಲ್ಲಿ ಉಳಿದು ಕೊನೆಗೆ ದಿನಾಂಕ 23–3–1998ರಲ್ಲಿ ನಗದೀಕರಿಸಿಕೊಂಡು ಹಣ ದುರುಪಯೋಗಪಡಿಸಿಕೊಂಡಿರುತ್ತಾರೆ.

**ಆರೋಪ ಸಂಖ್ಯೆ 7** ಆಪಾದಿತ ಅಧಿಕಾರಿಯು 1995–96ನೇ ಸಾಲಿನಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಜಿಲ್ಲೆಯ ವಿವಿಧ ಮೀನುಮರಿ ಉತ್ಪಾದನಾ ಕೇಂದ್ರಗಳಿಂದ ರೂ. 20,930–00ಗಳ ಬೆಲೆಯ ಮೀನುಮರಿಗಳನ್ನು ಆಮದು ಮಾಡಿಕೊಂಡು ಅದನ್ನು ಸಾಲದ ರೂಪದಲ್ಲಿ ಸರಬರಾಜು ಮಾಡಿ ಈ ಹನವು ಸರ್ಕಾರಕ್ಕೆ ಪಾವತಿಯಾಗಿರುವುದಿಲ್ಲ.

**ಆರೋಪ ಸಂಖ್ಯೆ 8** ಆಪಾದಿತ ಅಧಿಕಾರಿಯು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ 1995–96ನೇ ಸಾಲಿನಲ್ಲಿ ಎ.ಸಿ. ಬಿಲ್ ಸಂಖ್ಯೆ 30/95–96, ದಿನಾಂಕ 30–3–1996ರಂದು ರೂ. 5000–00 ಮತ್ತು ಎ.ಸಿ. ಬಿಲ್ ಸಂಖ್ಯೆ 31/95–96, ದಿನಾಂಕ 30–3–1996ರಂದು ರೂ. 1,000–00 ಖಜಾನೆಯಿಂದ ತೆಗೆದು ಈ ಹಣ ಖರ್ಚು ಮಾಡಿರುವುದಕ್ಕೆ ಸವಿವರ ವೆಚ್ಚದ ವಿವರಗಳನ್ನು ಮೇಲಾಧಿಕಾರಿಗಳಿಗೆ ಒಪ್ಪಿಸದೆ ಈ ಹಣ ದುರುಪಯೋಗ ಮಾಡಿಕೊಂಡಿರುತ್ತಾರೆ.

4) ವಿಚಾರಣಾಧಿಕಾರಿಗಳು ಸದರಿ ವಿಚಾರಣಾ ವರದಿಯನ್ನು ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರಿಗೆ ಸಲ್ಲಿಸಿರುತ್ತಾರೆ. ನಿಯಮಾನುಸಾರ ಮೀನುಗಾರಿಕೆ ನಿರ್ದೇಶಕರು ಸದರಿ ವಿಚಾರಣಾ ವರದಿಯ ಪ್ರತಿಯನ್ನು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಆಪಾದಿತ ಅಧಿಕಾರಿಗೆ ನೀಡಿ ಈ ಬಗ್ಗೆ 15 ದಿನಗಳೊಳಗಾಗಿ ಲಿಖಿತ ಹೇಳಿಕೆ ಸಲ್ಲಿಸುವಂತೆ ಸೂಚಿಸಿದ್ದರೂ ಆಪಾದಿತ ಅಧಿಕಾರಿಯು ಈ ಕಾರಣ ಕೇಳುವ ತಿಳುವಳಿಕೆ ಪತ್ರಕ್ಕೆ ತಮ್ಮ ಹೇಳಿಕೆಯನ್ನು ನೀಡಿರುವುದಿಲ್ಲವೆಂದೂ ಮೀನುಗಾರಿಕೆ ನಿರ್ದೇಶಕರು ವರದಿ ಮಾಡುತ್ತಾ ವಿಚಾರಣಾ ವರದಿ ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಮಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

5) ಮೇಲೆ ಹೇಳಿರುವಂತೆ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿದ್ದು, ವಿಚಾರಣಾಧಿಕಾರಿಗಳ ತೀರ್ಮಾನದಂತೆ ಸದರಿ ಆಪಾದಿತ ಅಧಿಕಾರಿಯು ಸರ್ಕಾರಕ್ಕೆ ಒಟ್ಟು ರೂ. 3,02–434–00ಗಳನ್ನು ಆರ್ಥಿಕ ನಷ್ಟವನ್ನು ಮಾಡಿರುವುದು ಸಾಬೀತಾಗಿರುವ ಕಾರಣ ಸದರಿ ಆಪಾದಿತ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 8(viii) ರನ್ವಯ ಸರ್ಕಾರಿ ಸೇವೆಯಿಂದ ಏಕೆ ವಜಾ ಮಾಡಬಾರದು ಎಂಬ ಬಗ್ಗೆ 15 ದಿನಗಳೊಳಗಾಗಿ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ 6–6–2005ರ ಕಾರಣ ಕೇಳುವ ಸೂಚನಾ ಪತ್ರದಲ್ಲಿ ಅವರಿಗೆ ಸೂಚಿಸಲಾಗಿತ್ತು. ಸದರಿ ಆಪಾದಿತ ಅಧಿಕಾರಿಯು ಕಾರಣ ಕೇಳುವ ಸೂಚನಾ ಪತ್ರಕ್ಕೆ ಸ್ಪಷ್ಟವಾದ, ಸಮಂಜಸವಾದ ಹಾಗೂ ಪೂರ್ಣವಾದ ಉತ್ತರವನ್ನು ಸಲ್ಲಿಸದೆ ಲಿಖಿತ ಹೇಳಿಕೆ ಸಲ್ಲಿಸಲು ಸಾಕಷ್ಟು ಕಾಲಾವಕಾಶವನ್ನು ನೀಡುವಂತೆ ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಮನವಿ ಮಾಡಿದೆ ಹಿನ್ನಲೆಯಲ್ಲಿ ಆರೋಪಿತ ಅಧಿಕಾರಿಗೆ ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಹಿಬರಹದಲ್ಲಿ ಒಂದು ತಿಂಗಳ ಕಾಲಾವಕಾಶ ನೀಡಿ ಈ ಅವಧಿಯೊಳಗೆ ಅವರ ಲಿಖಿತ ಸಮಜಾಯಿಷಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ನಂತರ ಆರೋಪಿತರು ಮೇಲೆ ಕ್ರಮ ಸಂಖ್ಯೆ (9)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಡಿಸೆಂಬರ್ 2005ರ ಅಂತ್ಯದವರೆಗೆ ಕಾಲಾವಕಾಶವನ್ನು ನೀಡುವಂತೆ ಮತ್ತೊಮ್ಮೆ ಸರ್ಕಾರಕ್ಕೆ ಸಲ್ಲಿಸಿದ ಮನವಿಯನ್ನು ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ (10)ರಲ್ಲಿ ಓದಲಾದ ಹಿಂಬರಹದಲ್ಲಿ ಆರೋಪಿತರಿಗೆ ದಿನಾಂಕ 31–12–2006ರವರೆಗೆ ಅಂತಿಮವಾಗಿ ಕಾಲಾವಕಾಶವನ್ನು ನೀಡಲಾಗಿತ್ತು. ಹೀಗೆ ಎರಡು ಬಾರಿ ಕಾಲಾವಕಾಶವನ್ನು ನೀಡಿದಾಗ್ಯೂ, ಆರೋಪಿತರು ತಮ್ಮ ಪೂರ್ಣ ಸಮಜಾಯಿಷಿಯನ್ನು ಸಲ್ಲಿಸದೆ ದಿನಾಂಕ 29–12–2005ರಲ್ಲಿ ಸಲ್ಲಿಸಿರುವ ಮನವಿಯಲ್ಲಿ ಇತರ ವಿಷಯ ಪ್ರಸ್ತಾಪಿಸುವುದರೊಂದಿಗೆ ಈ ಬಗ್ಗೆ ದಿನಾಂಕ 15–1–2006ರೊಳಗೆ ತಮ್ಮ ವಿವರಣೆಯನ್ನು ಸಲ್ಲಿಸುವುದಾಗಿ ತಿಳಿಸಿದ್ದರೂ ಸಹ ಅವರು ಸ್ಪಷ್ಟವಾದ ಮತ್ತು ಸಮಂಜಸವಾದ ಹಾಗೂ ಪೂರ್ಣವಾದ ಉತ್ತರವನ್ನು ಸಲ್ಲಿಸಿರುವುದಿಲ್ಲ.

6) ಈ ಮಧ್ಯೆ ಮೇಲೆ ಕ್ರಮ ಸಂಖ್ಯೆ (12)ರಲ್ಲಿ ಓದಲಾದ ಪತ್ರದಲ್ಲಿ ಈ ಆಪಾದಿತ ಅಧಿಕಾರಿಯ ವಿರುದ್ಧ ಮೇಲ್ಕಂಡ ಪ್ರಕರಣವಲ್ಲದೇ ನಿರ್ದೇಶನಾಲಯದ ಹಂತದಲ್ಲಿ ಶಿಸ್ತು ಕ್ರಮ ಕುರಿತು ಅನೇಕ ಪ್ರಕರಣಗಳಲ್ಲಿ ವಿಚಾರಣೆ ಕೈಗೊಂಡಿರುವ ಬಗ್ಗೆ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ವರದಿ ಮಾಡುತ್ತಾ, ಸದರಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಆರೋಪಿತರ ವಿರುದ್ಧ ಮಾಡಲಾದ ಸರ್ಕಾರಕ್ಕಾಗಿರುವ ನಷ್ಟದ ಹಣವನ್ನು ಆರೋಪಿತರು ಸರ್ಕಾರಕ್ಕೆ ಜಮಾ ಮಾಡಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು, ಈ ಅಧಿಕಾರಿಯು ಪದೇ ಪದೇ ದುಷ್ಕೃತ್ಯಗಳನ್ನು (Habitual Chronic Offender) ಎಸಗಿ ಸರ್ಕಾರಕ್ಕೆ ಹಣ ನಷ್ಟ ಉಂಟು ಮಾಡುತ್ತಿರುತ್ತಾರೆಂದು ಹಾಗೂ ಸರ್ಕಾರದ ಎಲ್ಲಾ ಕೆಲಸಗಳಿಗೂ ತೊಂದರೆ ಉಂಟು ಮಾಡುತ್ತಿರುವುದರಿಂದ ಇವರಿಂದ ಸರ್ಕಾರಕ್ಕೆ ಆಗಿರುವ ನಷ್ಟದ ಹಣವನ್ನು ವಸೂಲು ಮಾಡುವುದರ ಜೊತೆಗೆ ಸದರಿ ಆಪಾದಿತ ಅಧಿಕಾರಿಗಳಿಗೆ ಕಠಿಣ ದಂಡನೆಯನ್ನು ವಿಧಿಸುವಂತೆ ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

7) ಆರೋಪಿತ ಅಧಿಕಾರಿಯಾದ ಶ್ರೀ ಕೆ.ಎಂ. ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2). ಮಾಗಡಿ, ಮೀನುಗಾರಿಕೆ ಇಲಾಖೆ, ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಹಣ ರೂ. 3,02,434–00ಗಳನ್ನು ಸರ್ಕಾರಕ್ಕೆ ಜಮಾ ಮಾಡಿದ್ದರೂ ವಿಚಾರಣೆಯಲ್ಲಿ ಆರೋಪಿತರು ತಪ್ಪಿತಸ್ಥರೆಂದು ಕಂಡು ಬಂದಿರುತ್ತದೆ. ಆದ್ದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(vi)ರನ್ವಯ "ಕಡ್ಡಾಯ ನಿವೃತ್ತಿ" ಗೊಳಿಸುವ (Compulsory Retirement) ದಂಡನೆಯನ್ನು ವಿಧಿಸಲು ಶಿಸ್ತು ಪ್ರಾಧಿಕಾರವು ತೀರ್ಮಾನಿಸಿದೆ. ಈ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದೊಂದಿಗೆ ನಿಯಮಾನುಸಾರ ಸಮಾಲೋಚಿಸಿದ್ದು, ಅದರಂತೆ ಕಾರ್ಯದರ್ಶಿಗಳು, ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು, ರವರು ಮೇಲೆ ಕ್ರಮ ಸಂಖ್ಯೆ (11)ರಲ್ಲಿ ಓದಲಾದ ದಿನಾಂಕ 6–12–2006ರ ಪತ್ರದಲ್ಲಿ ಈ ಪ್ರಕರಣವನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಕೆ.ಎಂ. ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಹಣ ರೂ. 3,02,434–00ಗಳನ್ನು ಅವರಿಂದ ವಸೂಲು ಮಾಡಲು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರನ್ವಯ "ಕಡ್ಡಾಯ ನಿವೃತ್ತಿ"ಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಸಿದೆಯೆಂದು ತಿಳಿಸಿರುತ್ತಾರೆ. ಅದರಂತೆಯೆ ಈ ಬಗ್ಗೆ ಸಕಲ ವಲಯಗಳಿಂದ ಕೂಲಂಕಷವಾಗಿ ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ 1ನೇ ಷೆಡ್ಯೂಲ್‌ನ ಕ್ರಮ ಸಂಖ್ಯೆ 23ರ ಪ್ರಕಾರ ಸಚಿವ ಸಂಪುಟದ ಅನುಮೋದನೆ ಪಡೆದುಕೊಂಡು ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 241 ಮೀಇಸೇ 2003, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎಂ. ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರು ಎಸಗಿರುವ ತೀವ್ರತರವಾದ ಕರ್ತವ್ಯಲೋಪ, ದುರ್ನಡತೆಗಾಗಿ ಹಾಗೂ ಸರ್ಕಾರದ ರೂ. 3,02,434–00 (ರೂಪಾಯಿ ಮೂರು ಲಕ್ಷದ ಎರಡು ಸಾವಿರದ ನಾಲ್ಕುನೂರು ಮೂವತ್ತನಾಲ್ಕು ಮಾತ್ರ)ಗಳ ಹಣವನ್ನು ತಾತ್ಕಾಲಿಕವಾಗಿ ದುರುಪಯೋಗಿಪಡಿಸಿಕೊಂಡಿರುವುದು ದೃಢಪಟ್ಟಿರುವುದರಿಂದ, ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿ (Compulsorily Retired from Government Service) ಆದೇಶಿಸಿದೆ.

ತತ್ಸಂಬಂಧವಾಗಿ ಶ್ರೀ ಕೆ.ಎಂ. ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2) ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರನ್ನು ತತ್‌ಕ್ಷಣದಿಂದಲೇ ಅವರ ಈಗಿನ ಹುದ್ದೆಯ ಕರ್ತವ್ಯಗಳಿಂದ ಬಿಡುಗಡೆಗೊಳಿಸಲು ಕೂಡಲೇ ಕ್ರಮ ಕೈಗೊಳ್ಳುವಂತೆ ಹಾಗೂ ಅವರ ಹುದ್ದೆಗೆ ಸೂಕ್ತ ಪ್ರಭಾರ ವ್ಯವಸ್ಥೆಯನ್ನು ಮಾಡುವಂತೆಯೂ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರಿಗೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1590

**ಡಿ.ಎಂ. ರಾಜಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಜೆ.ಬಿ. ಕುಮಾರಸ್ವಾಮಿ, ಹಿಂದಿನ ಸಹಾಯಕ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ಇವರ ವಿರುದ್ಧ ಶಿಸ್ತು ಕ್ರಮ ದಂಡನೆ ವಿಧಿಸಿರುವ ಕ್ರಮವನ್ನು ತಡೆಹಿಡಿಯುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ವಾಕೈ 264 ಕೈಸೇವಿ 2005, ದಿ: 7–8–2008.
2. ಶ್ರೀ ಜೆ.ಬಿ. ಕುಮಾರಸ್ವಾಮಿ, ಇವರ ಮನವಿ ದಿ: 19–8–2008 ಹಾಗೂ ದಿ: 29–8–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, (ಹಿಂದಿನ ಸಹಾಯಕ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ

ಪಂಚಾಯತ್, ಚಿಕ್ಕಮಗಳೂರು) ಇವರನ್ನು ಕರ್ನಾಟಕ ನಾಗರೀಕ ಸೇವೆಗಳು (ಪ್ರೊಬೇಷನ್) ನಿಯಮಗಳು 1977ರ ನಿಯಮ 7ರ ಅನುಸಾರ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಿಮುಕ್ತಿಗೊಳಿಸಲು ಹಾಗೂ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ)ಗಳನ್ನು ಭೂಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಾತಿ ಮಾಡಲು ಹಾಗೂ ಅಧಿಕಾರಿಯವರ ವಿರುದ್ಧ ಸಿವಿಲ್ ಮೊಕದ್ದಮೆ ಹೂಡಲು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2)ರ ಮನವಿಯಲ್ಲಿ, ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಇವರು ಕರ್ನಾಟಕ ನಾಗರೀಕ ಸೇವೆಗಳು (ಪ್ರೊಬೇಷನ್) ನಿಯಮಗಳು 1977ರ ನಿಯಮ 7ರ ಅನುಸಾರ ತಮ್ಮನ್ನು ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಿರುವುದು ಕಾನೂನು ಪ್ರಕಾರ ಸರಿಯಾದುದಲ್ಲವೆಂದು, ತಾವು ವಿಚಾರಣೆಗೆ ಹಾಜರಾಗದೇ ಇರುವುದಕ್ಕೆ ಚುನಾವಣೆ ಅಧಿಕಾರಿ, ತಾಲ್ಲೂಕು ಪಂಚಾಯತ್ ಈ ಕರ್ತವ್ಯದಲ್ಲಿ ಹಾಗೂ ಇತರೆ ಚುನಾವಣೆ ಕಾರ್ಯದಲ್ಲಿ ನಿರತರಾಗಿದ್ದರಿಂದ ವಿಚಾರಗಳಿಗೆ ಹಾಜರಾಗಿರಲಿಲ್ಲವೆಂದು ನಿವೇದಿಸಿದ್ದಾರೆ. ತಮ್ಮ ಗೈರು ಹಾಜರಾತಿಗೆ ಸಂಬಂಧಿಸಿದಂತೆ, ತಮ್ಮ ತಾಯಿಯವರಿಗೆ ಹೃದಯಾಘಾತವಾಗಿದ್ದು, ಅಂತಹ ಕ್ಲಿಷ್ಟ ಸನ್ನಿವೇಶದಲ್ಲಿ ಕೆಲಸಕ್ಕೆ ಹಾಜರಾಗದೆ ಮೇಲಧಿಕಾರಿಗಳಿಗೆ ರಜೆ ಚೀಟಿ ಅಂಚೆ ಮೂಲಕ ಕಳುಹಿಸಿರುವುದಾಗಿಯೂ ಈ ವಿಚಾರಗಳನ್ನು ನಿವೇದಿಸಿಕೊಳ್ಳಲಾಗಿರುತ್ತದೆ ಎಂದು ಹಾಗೂ ಈ ಅಂಶಗಳನ್ನು ವಿಚಾರಣೆ ಸಂದರ್ಭದಲ್ಲಿ ಗಣನೆಗೆ ತೆಗೆದುಕೊಳ್ಳದೆ ಎಕ್ಸ್‌ಪಾರ್ಟಿ ಡಿಸಿಷನ್ (ಏಕಪಕ್ಷೀಯ ತೀರ್ಮಾನ) ತೆಗೆದುಕೊಂಡಿರುವುದರಿಂದ ಮತ್ತು ತಮಗೆ ವಯೋಮಿತಿ ದಾಟಿರುವುದರಿಂದ, ಬೇರೆ ಯಾವುದೇ ಕೆಲಸ ದೊರಕುವ ಭರವಸೆ ಇಲ್ಲದಿರುವುದರಿಂದ, ಮೇಲೆ ಓದಲಾದ ದಿ: 7–8–2008ರ ಸರ್ಕಾರದ ಆದೇಶವನ್ನು ತಡೆಹಿಡಿದು ಪುನಃ ಕೆಲಸಕ್ಕೆ ಹಾಜರಾಗಲು ಅನುಮತಿ ನೀಡಬೇಕೆಂದು ಹಾಗೂ ವಿಚಾರಣೆಗೆ ಹಾಜರಾಗಲು ಅನುಮತಿ ನೀಡಬೇಕೆಂದು ಕೋರಿದ್ದಾರೆ.

ಸದರಿಯವರು ಮನವಿಯಲ್ಲಿ ನಿವೇದಿಸಿಕೊಂಡಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 179 ಕೈಸೇವಿ 2008, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, (ಹಿಂದಿನ ಸಹಾಯಕ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು) ಇವರ ವಿರುದ್ಧ ದಿ: 7–8–2008ರಂದು ಹೊರಡಿಸಿದ ಸರ್ಕಾರದ ಆದೇಶ ಸಂ: ವಾಕೈ 264 ಕೈಸೇವಿ 2005ನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ. ಈ ಪ್ರಕರಣವನ್ನು ಒಂದು ನಿದರ್ಶನ ಎಂದು ಯಾವ ಸಂದರ್ಭದಲ್ಲೂ ಮುಂದಿನ ಪ್ರಕರಣಗಳಲ್ಲಿ ಅನ್ವಯಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1392

**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕಿನ 16 ಧಾರ್ಮಿಕ ಸಂಸ್ಥೆಗಳ ಕಾಮಗಾರಿಯನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತದವರಿಗೆ ವಹಿಸುವ ಬಗ್ಗೆ ಹಾಗೂ 9 ಧಾರ್ಮಿಕ ಸಂಸ್ಥೆಗಳ ಕಾಮಗಾರಿಗಳ ಅಂದಾಜುಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಸಿಎನ್‌ಆರ್.2.ಸಿಆರ್.140/2008–09, ದಿನಾಂಕ 30–9–2008.
2. ಆರ್ಥಿಕ ಇಲಾಖೆ (ಆಡಳಿತ) ಅಧಿಸೂಚನೆ ಸಂಖ್ಯೆ: ಲೋಇ.584.ಆಕೋ–3/08, ದಿನಾಂಕ 15–10–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ 30–9–2008ರಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ ಕ್ಷೇತ್ರದ 16 ಸಂಸ್ಥೆಗಳಿಗೆ ಸರ್ಕಾರದ ದಿನಾಂಕ 21–8–2008ರ ಆದೇಶದಲ್ಲಿ ರೂ. 2.00 ಕೋಟಿಗಳ ಅನುದಾನ ಮಂಜೂರಾಗಿದ್ದು, ಮಂಜೂರಾಗಿರುವ ಅನುದಾನಕ್ಕೆ ಸೀಮಿತಗೊಳಿಸಿ ಕರ್ನಾಟಕ ಭೂಸೇನಾ ನಿಗಮ ನಿಯಮಿತದವರಿಂದ ಅಂದಾಜುಪಟ್ಟಿಗಳನ್ನು ತಯಾರಿಸಿ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಜಿಲ್ಲಾಧಿಕಾರಿಗಳು, ರಾಯಚೂರುರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕಿಗೆ ಬರುವ ಈ ಕೆಳಕಂಡ 16 ದೇವಸ್ಥಾನಗಳ ಕಾಮಗಾರಿಯನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತಕ್ಕೆ ವಹಿಸಲು ಸರ್ಕಾರಕ್ಕೆ ಕೋರಿಕೆ ಸಲ್ಲಿಸಿದ್ದಾರೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಶ್ರೀ ಶಿವರಾಯನ ಧಾರ್ಮಿಕ ಸಂಸ್ಥೆಯ ಅಭಿವೃದ್ಧಿ ಕಾಮಗಾರಿ ಮಂಡರಗಿ ಗ್ರಾಮ | 23.75 |
| 2 | ಶ್ರೀ ಚನ್ನಬಸವೇಶ್ವರ ಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗಲಗ ಗ್ರಾಮ | 12.00 |
| 3 | ಶ್ರೀ ಜಯಗಾಂತಲಿಂಗೇಶ್ವರ ಧಾರ್ಮಿಕ ಕ್ಷೇತ್ರದ ಅಭಿವೃದ್ಧಿ ಜಾಲಹಳ್ಳಿ ಗ್ರಾಮ | 6.25 |
| 4 | ಶ್ರೀ ಬೂದಿ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಗಬ್ಬೂರು ಗ್ರಾಮ | 10.00 |
| 5 | ಶ್ರೀ ಬೆಟ್ಟದ ಅಮಾತೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ದೇವರ ಗುಡ್ಡ ಗ್ರಾಮ | 12.00 |
| 6 | ಶ್ರೀ ದೇವರಗುಂಡಗುರ್ತಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗುಂಡಗುರ್ತಿ ಗ್ರಾಮ | 12.00 |
| 7 | ಶ್ರೀ ಮಾಸಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಸರಕಲ್ ಗ್ರಾಮ | 12.00 |
| 8 | ಶ್ರೀ ಭಾಗ್ಯವಂತಿ ದೇವಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಅರಕೇರಾ ಗ್ರಾಮ | 23.75 |
| 9 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಜಾಗಟಕಲ್ ಗ್ರಾಮ | 10.00 |
| 10 | ಶ್ರೀ ರಂಗನಾಥ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಾನಸಗಲ್ ಗ್ರಾಮ | 23.75 |
| 11 | ಶ್ರೀ ಲಕ್ಷ್ಮಿನರಸಿಂಹ ಸುಕ್ಷೇತ್ರದ ಅಭಿವೃದ್ಧಿ ಕೊಪ್ಪರ ಗ್ರಾಮ | 6.25 |
| 12 | ಶ್ರೀ ರಾಘವೇಂದ್ರಸ್ವಾಮಿ ಸುಕ್ಷೇತ್ರದ ಅಭಿವೃದ್ಧಿ ದೇವದುರ್ಗ ಪಟ್ಟಣ | 2.50 |
| 13 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಹೂವಿನ ಹಡಗಿ ಗ್ರಾಮ | 23.75 |
| 14 | ಶ್ರೀ ಅಲ್ಲಮಪ್ರಭು ಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗೂಗಲ್ ಗ್ರಾಮ | 12.00 |
| 15 | ಶ್ರೀ ಸಿದ್ಧರಾಮೇಶ್ವರ ಸುಕ್ಷೇತ್ರದ ಅಭಿವೃದ್ಧಿ ದೇವದುರ್ಗ ಗ್ರಾಮ | 5.00 |
| 16 | ಶ್ರೀ ಸುಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಅರಕೆರೆ ಗ್ರಾಮ | 5.00 |

ಸದರಿ 16 ದೇವಸ್ಥಾನಗಳ ಪೈಕಿ ಈ ಕೆಳಕಾಣಿಸಿದ 9 ದೇವಸ್ಥಾನಗಳ ಕಾಮಗಾರಿಗಳ ಅಂದಾಜು ಮೊತ್ತ ರೂ. 10.00 ಲಕ್ಷಕ್ಕೂ ಮೇಲ್ಪಟ್ಟು ಇರುವುದರಿಂದ ಸದರಿ ದೇವಸ್ಥಾನಗಳ ಕಾಮಗಾರಿ ಕೈಗೊಳ್ಳಲು ತಯಾರಿಸಲಾದ ಅಂದಾಜುಪಟ್ಟಿ ಮತ್ತು ನಕ್ಷೆಗೆ ಆಡಳಿತಾತ್ಮಕ ಅನುಮೋದನೆ ಹಾಗೂ ಮೇಲೆ ತಿಳಿಸಲಾಗಿರುವ ಎಲ್ಲಾ ಕಾಮಗಾರಿಗಳನ್ನು ಭೂಸೇನಾ ನಿಗಮದ ವತಿಯಿಂದ ಕೈಗೊಳ್ಳಲು ಅನುಮತಿ ನೀಡುವಂತೆ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಶ್ರೀ ಶಿವರಾಯನ ಧಾರ್ಮಿಕ ಸಂಸ್ಥೆಯ ಅಭಿವೃದ್ಧಿ ಕಾಮಗಾರಿ ಮಂಡರಗಿ ಗ್ರಾಮ | 23.75 |
| 2 | ಶ್ರೀ ಚನ್ನಬಸವೇಶ್ವರ ಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗಲಗ ಗ್ರಾಮ | 12.00 |
| 3 | ಶ್ರೀ ಬೆಟ್ಟದ ಅಮಾತೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ದೇವರ ಗುಡ್ಡ ಗ್ರಾಮ | 12.00 |
| 4 | ಶ್ರೀ ದೇವರಗುಂಡಗುರ್ತಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗುಂಡಗುರ್ತಿ ಗ್ರಾಮ | 12.00 |
| 5 | ಶ್ರೀ ಮಾಸಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಸರಕಲ್ ಗ್ರಾಮ | 12.00 |
| 6 | ಶ್ರೀ ಭಾಗ್ಯವಂತಿ ದೇವಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಅರಕೇರಾ ಗ್ರಾಮ | 23.75 |
| 7 | ಶ್ರೀ ರಂಗನಾಥ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಾನಸಗಲ್ ಗ್ರಾಮ | 23.75 |
| 8 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಹೂವಿನ ಹಡಗಿ ಗ್ರಾಮ | 23.75 |
| 9 | ಶ್ರೀ ಅಲ್ಲಮಪ್ರಭು ಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗೂಗಲ್ ಗ್ರಾಮ | 12.00 |

ಮೇಲೆ ಓದಲಾದ (2)ರಲ್ಲಿ ಆರ್ಥಿಕ ಇಲಾಖೆಯು ತನ್ನ ಅಧಿಸೂಚನೆ ದಿನಾಂಕ 15–10–2008ರಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ (ತಾ) 16 ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿ ಕಾಮಗಾರಿಗಳನ್ನು ನೇರವಾಗಿ ಕರ್ನಾಟಕ ಭೂಸೇನಾ ನಿಗಮಕ್ಕೆ ವಹಿಸಿಕೊಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ –1999ರ ಕಲಂ 4(ಜಿ)ರಡಿಯಲ್ಲಿ ಪಾರದರ್ಶಕ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಮೇಲೆ ವಿವರಿಸಿರುವ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 148 ಮುಅಬಿ 2008(ಭಾ), ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2008.**

ಪ್ರಸ್ತಾವನೆಯನ್ನು ವಿವರಿಸಿರುವ ಹಿನ್ನೆಲೆಯಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕಿನ ಈ ಕೆಳಕಾಣಿಸಿದ 16 ದೇವಸ್ಥಾನಗಳ ಅಭಿವೃದ್ಧಿ ಕಾಮಗಾರಿಗಳನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತ ವತಿಯಿಂದ ಕೈಗೊಳ್ಳಲು ಸರ್ಕಾರವು ಅನುಮತಿ ನೀಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಶ್ರೀ ಶಿವರಾಯನ ಧಾರ್ಮಿಕ ಸಂಸ್ಥೆಯ ಅಭಿವೃದ್ಧಿ ಕಾಮಗಾರಿ ಮಂಡರಗಿ ಗ್ರಾಮ | 23.75 |
| 2 | ಶ್ರೀ ಚನ್ನಬಸವೇಶ್ವರ ಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗಲಗ ಗ್ರಾಮ | 12.00 |
| 3 | ಶ್ರೀ ಜಯಗಾಂತಲಿಂಗೇಶ್ವರ ಧಾರ್ಮಿಕ ಕ್ಷೇತ್ರದ ಅಭಿವೃದ್ಧಿ ಜಾಲಹಳ್ಳಿ ಗ್ರಾಮ | 6.25 |
| 4 | ಶ್ರೀ ಬೂದಿ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಗಬ್ಬೂರು ಗ್ರಾಮ | 10.00 |
| 5 | ಶ್ರೀ ಬೆಟ್ಟದ ಅಮಾತೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ದೇವರ ಗುಡ್ಡ ಗ್ರಾಮ | 12.00 |
| 6 | ಶ್ರೀ ದೇವರಗುಂಡಗುರ್ತಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗುಂಡಗುರ್ತಿ ಗ್ರಾಮ | 12.00 |
| 7 | ಶ್ರೀ ಮಾಸಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಸರಕಲ್ ಗ್ರಾಮ | 12.00 |
| 8 | ಶ್ರೀ ಭಾಗ್ಯವಂತಿ ದೇವಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಅರಕೇರಾ ಗ್ರಾಮ | 23.75 |
| 9 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಜಾಗಟಕಲ್ ಗ್ರಾಮ | 10.00 |
| 10 | ಶ್ರೀ ರಂಗನಾಥ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಾನಸಗಲ್ ಗ್ರಾಮ | 23.75 |
| 11 | ಶ್ರೀ ಲಕ್ಷ್ಮಿನರಸಿಂಹ ಸುಕ್ಷೇತ್ರದ ಅಭಿವೃದ್ಧಿ ಕೊಪ್ಪರ ಗ್ರಾಮ | 6.25 |
| 12 | ಶ್ರೀ ರಾಘವೇಂದ್ರಸ್ವಾಮಿ ಸುಕ್ಷೇತ್ರದ ಅಭಿವೃದ್ಧಿ ದೇವದುರ್ಗ ಪಟ್ಟಣ | 2.50 |
| 13 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಹೂವಿನ ಹಡಗಿ ಗ್ರಾಮ | 23.75 |
| 14 | ಶ್ರೀ ಅಲ್ಲಮಪ್ರಭು ಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗೂಗಲ್ ಗ್ರಾಮ | 12.00 |
| 15 | ಶ್ರೀ ಸಿದ್ಧರಾಮೇಶ್ವರ ಸುಕ್ಷೇತ್ರದ ಅಭಿವೃದ್ಧಿ ದೇವದುರ್ಗ ಗ್ರಾಮ | 5.00 |
| 16 | ಶ್ರೀ ಸುಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಅರಕೆರೆ ಗ್ರಾಮ | 5.00 |

ಮುಂದುವರೆದು ಮೇಲಿನ 16 ದೇವಸ್ಥಾನಗಳ ಪೈಕಿ ಈ ಕೆಳಕಾಣಿಸಿದ 9 ದೇವಸ್ಥಾನಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಕರ್ನಾಟಕ ಭೂಸೇನಾ ನಿಗಮದ ವತಿಯಿಂದ ತಯಾರಿಸಲಾದ ಅಂದಾಜುಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಶ್ರೀ ಶಿವರಾಯನ ಧಾರ್ಮಿಕ ಸಂಸ್ಥೆಯ ಅಭಿವೃದ್ಧಿ ಕಾಮಗಾರಿ ಮಂಡರಗಿ ಗ್ರಾಮ | 23.75 |
| 2 | ಶ್ರೀ ಚನ್ನಬಸವೇಶ್ವರ ಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗಲಗ ಗ್ರಾಮ | 12.00 |
| 3 | ಶ್ರೀ ಬೆಟ್ಟದ ಅಮಾತೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ದೇವರ ಗುಡ್ಡ ಗ್ರಾಮ | 12.00 |
| 4 | ಶ್ರೀ ದೇವರಗುಂಡಗುರ್ತಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗುಂಡಗುರ್ತಿ ಗ್ರಾಮ | 12.00 |
| 5 | ಶ್ರೀ ಮಾಸಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಸರಕಲ್ ಗ್ರಾಮ | 12.00 |
| 6 | ಶ್ರೀ ಭಾಗ್ಯವಂತಿ ದೇವಿ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಅರಕೇರಾ ಗ್ರಾಮ | 23.75 |
| 7 | ಶ್ರೀ ರಂಗನಾಥ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಮಾನಸಗಲ್ ಗ್ರಾಮ | 23.75 |
| 8 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಹೂವಿನ ಹಡಗಿ ಗ್ರಾಮ | 23.75 |
| 9 | ಶ್ರೀ ಅಲ್ಲಮಪ್ರಭು ಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಕಾಮಗಾರಿ ಗೂಗಲ್ ಗ್ರಾಮ | 12.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1477

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

## ಕಾರ್ಮಿಕ ಸಚಿವಾಲಯ

**ವಿಷಯ :** ಡಾ: ಶರಣಬಸಪ್ಪ, ವಿಮಾ ವೈದ್ಯಾಧಿಕಾರಿ, ಇವರ ಅನಧಿಕೃತ ಗೈರುಹಾಜರಾತಿ – ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ಇವಿ/23/05–06, ದಿ: 6–12–2005.
2. ಸರ್ಕಾರದ ನೋಟೀಸ್ ಸಂಖ್ಯೆ: ಕಾಇ 16 ಎಲ್ಎಸ್ಐ 2006, ದಿ: 3/4–2–2006.
3. ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ಇವಿ/23/05–06, ದಿನಾಂಕ 19–4–2006.
4. ಸರ್ಕಾರಿ ಆದೇಶ ಸಂಖ್ಯೆ: ಕಾಇ 16 ಎಲ್ಎಸ್ಐ 2006, ದಿನಾಂಕ 9–6–2006.
5. ವಿಚಾರಣಾಧಿಕಾರಿಗಳ ದಿನಾಂಕ 22–11–2006ರ ವರದಿ.
6. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಾಇ 16 ಎಲ್ಎಸ್ಐ 2006, ದಿ: 22–12–2006.
7. ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ಇವಿ/23/05–06, ದಿ: 5–5–2007.

**ಪ್ರಸ್ತಾವನೆ :**

ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 6–12–2005ರ ತಮ್ಮ ಪತ್ರದಲ್ಲಿ ಡಾ: ಶರಣಬಸಪ್ಪ, ಕಾರಾವಿ ಚಿಕಿತ್ಸಾಲಯ, ವಾಡಿ ಗುಲ್ಬರ್ಗಾ ಜಿಲ್ಲೆ ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ 15–4–2005 ರಿಂದ 14–6–2005ರವರೆಗೆ ಮತ್ತು 16–6–2005 ರಿಂದ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸುವಂತೆ ಕೋರಿದ್ದರು. ಡಾ: ಶರಣಬಸಪ್ಪ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ 3/4–2–2006ರ ಷೋಕಾಸ್ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ನೋಂದಾಯಿತ ಅಂಚೆ ಸ್ವೀಕೃತಿ ಮೂಲಕ ಜಾರಿ ಮಾಡಿ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಈ ನೋಟೀಸ್ ತಲುಪಿದ 15 ದಿವಸದೊಳಗಾಗಿ ಲಿಖಿತ ಮೂಲಕ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿತ್ತು. ಡಾ: ಶರಣಬಸಪ್ಪ, ವಿಮಾ ವೈದ್ಯಾಧಿಕಾರಿ ಇವರಿಗೆ ಸರ್ಕಾರದಿಂದ ಹೊರಡಿಸಿದ್ದ ದೋಷಾರೋಪಣಾ ಪಟ್ಟಿ ಮತ್ತು ನೋಟೀಸನ್ನು ಸ್ವೀಕರಿಸಿದ ಸ್ವೀಕೃತಿ ಪತ್ರವು ತಲುಪಿದ್ದು ಇವರು ಸಂಖ್ಯೆ.ಇ–1869361 ದಿನಾಂಕ 7–6–2002ರ ಪಾಸ್‌ಪೋರ್ಟ್‌ನ್ನು ಹೊಂದಿರುತ್ತಾರೆಂದು ತಿಳಿಸುತ್ತಾ ಸದರಿ ವೈದ್ಯರು ಅವಧಿ ಮೀರಿದ ತರುವಾಯವೂ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 11 (5)(ಸಿ)ರಡಿ ನಿಯಮ 11 (2)ರ ಪ್ರಕಾರ ವಿಚಾರಣಾಧಿಕಾರಿ ಮತ್ತು ನಿಯಮ 11(5)(ಸಿ)ರಡಿ ಮಂಡನಾಧಿಕಾರಿಯವರನ್ನು ನೇಮಿಸುವಂತೆ ನಿರ್ದೇಶಕರು, ಕಾರಾವಿ ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಡಾ: ಶರಣಬಸಪ್ಪ, ಇವರು ನಿಗಧಿತ ಅವಧಿಯ ನಂತರವೂ ಸಹ ಇವರ ವಿರುದ್ಧ ಮಾಡಲಾದ ಆರೋಪಗಳಿಗೆ ಸಂಬಂಧಿಸಿದಂತೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲವಾದ್ದರಿಂದ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರನುಸಾರ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಎ. ಕೃಷ್ಣಪ್ಪ, ನಿವೃತ್ತ ಮನೋಹರ್ ಕೆ. ಗೂಡೂರ್ ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ (4)ರ ಆದೇಶದಲ್ಲಿ ನೇಮಿಸಿದೆ. ಅದರಂತೆ ವಿಚಾರಣಾಧಿಕಾರಿಗಳು ಡಾ: ಶರಣಬಸಪ್ಪ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಿ, ದಿನಾಂಕ 22–11–2006ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಯವರು ವಿಚಾರಣೆ ನಡೆಸಿ ಸಲ್ಲಿಸಿರುವ ತಮ್ಮ ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಹೊರಿಸಿರುವ ಆರೋಪವು ರುಜುವಾತಾಗಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು, ಇವರು ಮೇಲೆ (7)ರಲ್ಲಿ ಓದಲಾದ ದಿನಾಂಕ 5–5–07ರ ತಮ್ಮ ಪತ್ರದಲ್ಲಿ ಸರ್ಕಾರದಿಂದ ಹೊರಡಿಸಲಾದ 2ನೇ ಷೋಕಾಸ್ ನೋಟೀಸ್ ದಿನಾಂಕ 22–12–2006ನ್ನು ನಿರ್ದೇಶನಾಲಯದ ಹಿಂಬರಹ ದಿನಾಂಕ 4–1–2007ರ ಪ್ರಕಾರ ಡಾ: ಶರಣಬಸಪ್ಪ, ವಿಮಾ ವೈದ್ಯಾಧಿಕಾರಿ ಇವರಿಗೆ ಮಹಜರ್ ಪದ್ಧತಿಯನ್ನು ಅನುಸರಿಸಿ ಜಾರಿಗೊಳಿಸುವಂತೆ ಸೂಚಿಸಿದ ಪ್ರಕಾರವಾಗಿ ಸದರಿ ವೈದ್ಯರ ತಮ್ಮನಾದ ಶ್ರೀ ಸಂತೋಷ್ ವಿ. ಹೊಸಮನಿ ಎಂಬುವವರಿಗೆ ದಿನಾಂಕ 10–2–2007ರಂದು ಜಾರಿಗೊಳಿಸಿದ್ದು, ನಿಗಧಿತ ಅವಧಿ ಮೀರಿದ್ದರೂ ಸಹ ಸದರಿ ವೈದ್ಯರಿಂದ ಲಿಖಿತ ಹೇಳಿಕೆಯನ್ನು ಇದುವರೆವಿಗೂ ಸ್ವೀಕರಿಸಿರುವುದಿಲ್ಲವೆಂದೂ ತಿಳಿಸುತ್ತಾ ಡಾ: ಶರಣಬಸಪ್ಪ, ವಿಮಾ ವೈದ್ಯಾಧಿಕಾರಿ ಕಾರಾವಿ ಚಿಕಿತ್ಸಾಲಯ, ವಾಡಿ ಗುಲ್ಬರ್ಗಾ ಜಿಲ್ಲೆ ಇವರು ದಿನಾಂಕ 15–4–2005 ರಿಂದ ಇಲ್ಲಿಯವರೆಗೆ

ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪಗಳು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರ ಪ್ರಕಾರ ದಂಡನೆ ವಿಧಿಸುವ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಡಾ: ಶರಣಬಸಪ್ಪ, ವಿಮಾ ವೈದ್ಯಾಧಿಕಾರಿ ಇವರು 15–4–2005 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪಗಳ ಕುರಿತು ನಡೆಸಿದ ಇಲಾಖಾ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗಿರುವ ಹಿನ್ನಲೆಯಲ್ಲಿ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು ನಿಯಮ 108ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರ ಅನುಸಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 16 ಎಲ್‌ಎಸ್‌ಐ 2006, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಡಾ: ಶರಣಬಸಪ್ಪ, ವಿಮಾ ವೈದ್ಯಾಧಿಕಾರಿ, ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆ ಇವರು ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ವಾಡಿ ಗುಲ್ಬರ್ಗಾ ಜಿಲ್ಲೆ ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ 15–4–2005 ರಿಂದ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪ ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳ ನಿಯಮ 108ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರ ಅನುಸಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ. ಹಾಗೂ ಈ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1616

**ಗೋವಿಂದಸ್ವಾಮಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

## ಸಹಕಾರ ಸಚಿವಾಲಯ

**ವಿಷಯ :** ಕಂಬದಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಂಬದಹಳ್ಳಿ, ಮಂಡ್ಯ ಇದರ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಿಒ 02 ಸಿಎಲ್‌ಎಂ 2007, ದಿನಾಂಕ 22–9–2007.
2. ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರ ಸಂಖ್ಯೆ: ಡಿಎವೈ–1/ಜೆಎಂಸಿ/41/2008–09, ದಿನಾಂಕ 30–9–2008.

**ಪ್ರಸ್ತಾವನೆ :**

ಕಂಬದಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಂಬದಹಳ್ಳಿ, ಮಂಡ್ಯ ಇದಕ್ಕೆ ವಿಶೇಷಾಧಿಕಾರಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31ರನ್ವಯ ದಿನಾಂಕ 1–10–2004ರಂದು ವಿಶೇಷಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ತದನಂತರ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸಿದ್ದು ಮೇಲೆ ಓದಲಾದ (1)ರ ಆದೇಶದಲ್ಲಿ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ 1–4–2006 ರಿಂದ 31–3–2008ರವರೆಗೆ ವಿಸ್ತರಿಸಲು ಅನುವಾಗುವಂತೆ ಸದರಿ ಅಧಿನಿಯಮದ ಪ್ರಕರಣ 31(1)ಕ್ಕೆ ಮಾರ್ಪಾಡು ಮಾಡಲಾಗಿರುತ್ತದೆ. ಸದರಿ ಬ್ಯಾಂಕಿನಲ್ಲಿ ಮಾಜಿ ಕಾರ್ಯದರ್ಶಿಯವರು ಪ್ರಭಾರ ವಹಿಸಿಕೊಡದೇ ಇರುವುದರಿಂದ ಸಂಘದಲ್ಲಿ ಕುಳುವಾರು ಪಟ್ಟಿ, ಷೇರು ಪುಸ್ತಕ ಲಭ್ಯವಿಲ್ಲದಿರುವುದರಿಂದ ಹಾಗೂ ಸಂಘದ ಮಾಜಿ ಕಾರ್ಯದರ್ಶಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 109ರಂತೆ ಕ್ರಮವನ್ನು ಕೈಗೊಂಡಿದ್ದು, ಷೇರು ಪುಸ್ತಕ ದೊರೆತ ಕೂಡಲೇ ಸಂಘದ ಆಡಳಿತ ಮಂಡಳಿಯನ್ನು ಪುನರ್‌ರಚಿಸಲು ಸಾಧ್ಯವಿದ್ದು, ಪ್ರಸ್ತುತ ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸಿ, ಆಡಳಿತ ಮಂಡಳಿಯನ್ನು ಪುನರ್ ರಚಿಸಲು ಸಾಧ್ಯವಾಗದಿರುವ ಕಾರಣದಿಂದಾಗಿ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ 1–4–2008ರಿಂದ 31–3–2009ರವರೆಗೆ ವಿಸ್ತರಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಅಪರ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 193 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಕಂಬದಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಂಬದಹಳ್ಳಿ, ಮಂಡ್ಯ ಇದರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ 1–4–2008 ರಿಂದ 31–3–2009ರವರೆಗೆ

ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕಂಬದಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಂಬದಹಳ್ಳಿ, ಮಂಡ್ಯ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ;

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ನಲವತ್ತೆಂಟು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 31 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31–3–2009ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31ರ ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1615

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ಮಾನವ ತಳಿ ಶಾಸ್ತ್ರ ಕೇಂದ್ರಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 24 ಆಡವಿ 2008, ದಿನಾಂಕ 12–6–08.
2. ನಿರ್ದೇಶಕರು, ಮಾನವ ತಳಿ ಶಾಸ್ತ್ರ ಕೇಂದ್ರರವರ ಪತ್ರ ದಿ: 8–10–2008.

**ಪ್ರಸ್ತಾವನೆ :**

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–01 ಮಾಹಿತಿ ತಂತ್ರಜ್ಞಾನ– ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು (ಯೋಜನೆ)" ರಡಿಯಲ್ಲಿ ರೂ. 600.00 ಲಕ್ಷಗಳ ಅನುದಾನವು ಒದಗಣೆಯಾಗಿದ್ದು, ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾನವ ತಳಿ ಶಾಸ್ತ್ರ ಕೇಂದ್ರಕ್ಕೆ ರೂ. 10.00 ಲಕ್ಷ ಹಂಚಿಕೆ ಮಾಡಲಾಗಿದೆ.

ನಿರ್ದೇಶಕರು, ಮಾನವ ತಳಿ ಶಾಸ್ತ್ರ ಕೇಂದ್ರ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ 8–10–2008ರ ಪತ್ರದಲ್ಲಿ ಮೇಲೆ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾಗಿರುವ ರೂ. 10.00 ಲಕ್ಷಗಳ ಅನುದಾನವನ್ನು ಮಾನವ ತಳಿ ಶಾಸ್ತ್ರ ಕೇಂದ್ರಕ್ಕೆ ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರೂ. 10.00 ಲಕ್ಷಗಳ ಅನುದಾನವನ್ನು ಮಾನವ ತಳಿ ಶಾಸ್ತ್ರ ಕೇಂದ್ರಕ್ಕೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 60 ಅಡವಿ 2008, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2008–09ನೇ ಸಾಲಿಗೆ ಮಾನವ ತಳಿ ಶಾಸ್ತ್ರ ಕೇಂದ್ರಕ್ಕೆ (Centre for Human Genetics) ರೂ. 10.00 ಲಕ್ಷಗಳ (ರೂ. ಹತ್ತು ಲಕ್ಷಗಳು ಮಾತ್ರ) ಅನುದಾನವನ್ನು ನೀಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ –059–ಇತರೆ ಖರ್ಚುಗಳು (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಗೌರವ ನಿರ್ದೇಶಕರು, ಮಾನವ ತಳಿ ಶಾಸ್ತ್ರ ಕೇಂದ್ರರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008, ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1607

**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ JNNURM ಅನುಷ್ಠಾನಕ್ಕಾಗಿ ಒಂದು ಸಂಖ್ಯೆ ಹೆಚ್ಚುವರಿ ತಾಂತ್ರಿಕ ನಿರ್ದೇಶಕರ ಹುದ್ದೆಯನ್ನು (ಅಧೀಕ್ಷಕ ಅಭಿಯಂತರರ ತತ್ಸಮಾನದ ಹುದ್ದೆ) ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ: ಕೊನಿಮ/ಆಯುಕ್ತರು/ತಾಂಶಾ/2007–08, ದಿನಾಂಕ 24–9–2008.
2. ದಿನಾಂಕ 11–9–2008ರಂದು ನಡೆದ ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ)ಯ 4ನೇ ಸಭೆಯ ನಡವಳಿ.
3. ಲೋಕೋಪಯೋಗಿ ಇಲಾಖೆ ಅಧಿಸೂಚನೆ ಸಂಖ್ಯೆ: ಲೋಇ 206 ಸೇಎಸು 2008, ದಿನಾಂಕ 23–9–2008.
4. ವಸತಿ ಇಲಾಖೆಯ ಅಧಿಸೂಚನೆ ಸಂಖ್ಯೆ ವಇ 30 ಕೊಮಂಸೇ 2008, ದಿನಾಂಕ 7–10–2008.
5. ವಸತಿ ಇಲಾಖೆಯ ಅಧಿಸೂಚನೆ ಸಂಖ್ಯೆ ವಇ 30 ಕೊಮಂಸೇ 2008, ದಿನಾಂಕ 7–10–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಜವಾಹರ್ ನೆಹರು ರಾಷ್ಟ್ರೀಯ ನಗರ ನವೀಕರಣ ಯೋಜನೆಯಡಿ BSUP-IHSDP ಯೋಜನೆಗಳಡಿ ಒಟ್ಟು 33095 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ಹಾಲಿ ಮಂಡಳಿಗೆ ಒಂದು ತಾಂತ್ರಿಕ ನಿರ್ದೇಶಕರ ಹುದ್ದೆ ಮಂಜೂರಾಗಿದ್ದು, ಪ್ರಸ್ತಾಪಿತ ಯೋಜನೆಗಳನ್ನು ಉತ್ತಮ ಗುಣಮಟ್ಟದೊಂದಿಗೆ ಸಮರ್ಪಕವಾಗಿ ಹಾಗೂ ನಿಗಧಿತ ಕಾಲಾವಧಿಯೊಳಗೆ ಪೂರ್ಣಗೊಳಿಸಬೇಕಾಗಿರುವ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ (2)ರಂತೆ ದಿನಾಂಕ 11–9–2008ರಂದು ನಡೆದ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಯೋಜನಾ ಅವಧಿಗೆ ಸೀಮಿತವಾಗಿ, ಮಂಡಳಿಗೆ ಒಂದು ಸಂಖ್ಯೆ ಹೆಚ್ಚುವರಿ ತಾಂತ್ರಿಕ ನಿರ್ದೇಶಕರ (ಅಧೀಕ್ಷಕ ಅಭಿಯಂತರರ ತತ್ಸಮಾನದ ಹುದ್ದೆ) ಸೇವೆಯನ್ನು ಎರವಲು ಸೇವೆಯ ಮೇರೆಗೆ ಪಡೆಯುವ ಬಗ್ಗೆ ಅನುಮೋದನೆಯನ್ನು ನೀಡಲಾಗಿದ್ದು, ಈ ಹೆಚ್ಚುವರಿ ಹುದ್ದೆಗೆ ತಗಲುವ ವೆಚ್ಚವನ್ನು ಮಂಜೂರಾದ ಯೋಜನಾ ವೆಚ್ಚದಲ್ಲಿ ಭರಿಸಲಾಗುವುದರಿಂದ, ಒಂದು ಸಂಖ್ಯೆ ಹೆಚ್ಚುವರಿ ತಾಂತ್ರಿಕ ನಿರ್ದೇಶಕ (ಅಧೀಕ್ಷಕ ಅಭಿಯಂತರರು) ರನ್ನು ಮಂಡಳಿಗೆ ಸಂಬಂಧಪಟ್ಟ ಇಲಾಖೆಯಿಂದ ನಿಯೋಜಿಸಬೇಕೆಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅಧಿಸೂಚನೆಯಲ್ಲಿ ಲೋಕೋಪಯೋಗಿ ಇಲಾಖೆಯು ಶ್ರೀ ಸಣ್ಣ ಚಿತ್ತಯ್ಯ, ಅಧೀಕ್ಷಕ ಅಭಿಯಂತರರು ಇವರನ್ನು ವಸತಿ ಇಲಾಖೆಯ ವಶಕ್ಕೆ ನೀಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಲೋಕೋಪಯೋಗಿ ಇಲಾಖೆಯ ಸೂಚನೆಯಂತೆ ಶ್ರೀ ಸಣ್ಣ ಚಿತ್ತಯ್ಯ, ಅಧೀಕ್ಷಕ ಅಭಿಯಂತರರನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಶ್ರೀ ಎಂ. ರವೀಂದ್ರಪ್ಪ, ಅಧೀಕ್ಷಕ ಅಭಿಯಂತರರ (ತಾಂತ್ರಿಕ ನಿರ್ದೇಶಕರು) ಜಾಗದಲ್ಲಿ ಮರು ನೇಮಕಗೊಳಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ.

ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಎಸ್‌ಎಲ್‌ಇಸಿ ಸಭೆಯ ತೀರ್ಮಾನದಂತೆ, ಮಂಡಳಿಯಲ್ಲಿ ಅಧೀಕ್ಷಕ ಇಂಜಿನಿಯರ್ ಆಗಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಂ. ರವೀಂದ್ರಪ್ಪ (ಇವರ ಜಾಗಕ್ಕೆ ಶ್ರೀ ಸಣ್ಣ ಚಿತ್ತಯ್ಯ ರವರನ್ನು ವರ್ಗಾಯಿಸಿದ ಹಿನ್ನಲೆಯಲ್ಲಿ) ಇವರ ಸೇವೆಯನ್ನು ನರ್ಮ್ ಯೋಜನೆಯ ಅವಧಿಗಾಗಿ ಸೃಜಿಸಲಾದ ಹೆಚ್ಚುವರಿ ಹುದ್ದೆಯಲ್ಲಿ ಮುಂದುವರಿಸಲು ಕೋರಿದ್ದರಿಂದ ಈ ವಿಷಯವನ್ನು ಪರಿಶೀಲಿಸಿ ಕ್ರಮ ಸಂಖ್ಯೆ (5)ರಂತೆ, ಇಬ್ಬರು ಅಧೀಕ್ಷಕ ಅಭಿಯಂತರರುಗಳಿಗೆ ಕಾರ್ಯಭಾರವನ್ನು ವಹಿಸಿ, ದಿನಾಂಕ 7–10–2008ರಂದು ಒಂದು ಅಧಿಸೂಚನೆ ಹೊರಡಿಸಲಾಗಿದೆ.

ಸರ್ಕಾರ ಈ ಪ್ರಸ್ತಾವನೆಯನ್ನು ಪೂರ್ಣ ಪ್ರಮಾಣದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 29 ಕೊಮಂಸೇ 2008, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2008.**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ದಿನಾಂಕ 11–9–2008ರಂದು ನಡೆದ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಈ ಕೆಳಗಿನಂತೆ ತೀರ್ಮಾನ ಕೈಗೊಂಡಿರುವುದರಿಂದ:

"The Committee accorded approval for the creation of one additional post of Technical Director (in the cadre of superintending Engineer) in Karnataka Slum Clearance Board for the project period of the JNNURM Schemes in accordance with the powers delegated to the State Level Empowered Committe by the Government vide No. DOH 24 SBA 2007, dated 4-8-2007. The Committee also noted that the said post will be co-terminus with the project."

ಕೇಂದ್ರ ಸರ್ಕಾರದ ನರ್ಮ್ ಯೋಜನೆಗಳನ್ನು ಉತ್ತಮ ಗುಣಮಟ್ಟದೊಂದಿಗೆ ಸಮರ್ಪಕವಾಗಿ ಹಾಗೂ ನಿಗದಿತ ಕಾಲಾವಧಿಯೊಳಗೆ ಪೂರ್ಣಗೊಳಿಸಲು ಅನುಕೂಲವಾಗಲು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಒಂದು ಸಂಖ್ಯೆ ಹೆಚ್ಚುವರಿ ತಾಂತ್ರಿಕ ನಿರ್ದೇಶಕರ (ಅಧೀಕ್ಷಕ ಅಭಿಯಂತರರ ತತ್ಸಮಾನದ ಹುದ್ದೆ) ಹುದ್ದೆಯನ್ನು, ಮೇಲಿನ ಸಭೆಯ ನಿರ್ಣಯದಂತೆ, ಯೋಜನಾ ಅವಧಿಗೆ ಸೀಮಿತವಾಗಿ (co-terminus with the project) ಸೃಜಿಸಿ, ಎರವಲು ಸೇವೆಯ ಆಧಾರದ ಮೇಲೆ ಪಡೆಯಲು ಅನುಮೋದನೆ ನೀಡಿದೆ. ಅದರಂತೆ ಈ ಹೆಚ್ಚುವರಿ ಹುದ್ದೆಗೆ ತಗಲುವ ವೆಚ್ಚವನ್ನು ಮಂಜೂರಾದ ಯೋಜನಾ ವೆಚ್ಚದಲ್ಲಿ ಭರಿಸತಕ್ಕದ್ದು.

ಮುಂದುವರಿದು, ಲೋಕೋಪಯೋಗಿ ಇಲಾಖೆಯು ತನ್ನ ಅಧಿಸೂಚನೆ ಸಂಖ್ಯೆ: ಲೋಇ 206 ಸೇಎಸು 2008, ದಿನಾಂಕ 23–9–2008ರಲ್ಲಿ ಶ್ರೀ ಸಣ್ಣ ಚಿತ್ತಯ್ಯ, ಅಧೀಕ್ಷಕ ಇಂಜಿನಿಯರ್, ನೀರಾವರಿ ನಿರ್ಮಾಣ ವೃತ್ತ, ಮಂಡ್ಯ ಇವರ ಸೇವೆಯನ್ನು ಶ್ರೀ ಎಂ. ರವೀಂದ್ರಪ್ಪ, ತಾಂತ್ರಿಕ ನಿರ್ದೇಶಕರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಬೆಂಗಳೂರು ಇವರ ಜಾಗಕ್ಕೆ ವರ್ಗಾಯಿಸಿದ್ದರಿಂದ ಮತ್ತು ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಬಿಎಸ್‌ಯುಪಿ/ಐಹೆಚ್ಎಸ್‌ಡಿಪಿ ಯೋಜನೆಗಳ ಕಾರ್ಯಕ್ರಮಗಳ ತೀವ್ರ ಹಾಗೂ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಹೆಚ್ಚುವರಿ ಅಧೀಕ್ಷಕ ಅಭಿಯಂತರರುಗಳ ಹುದ್ದೆಯನ್ನು ಸೃಜಿಸುವುದು ಅವಶ್ಯವಿರುವುದನ್ನು ವ್ಯಕ್ತಪಡಿಸಿರುವುದರಿಂದ ಮತ್ತು ಎಸ್‌ಎಲ್‌ಇಸಿ ಸಭೆಯು ಹೆಚ್ಚುವರಿ ಅಧೀಕ್ಷಕ ಅಭಿಯಂತರರುಗಳ ಹುದ್ದೆಯನ್ನು ಸೃಜಿಸುವುದಕ್ಕೆ ಅನುಮೋದನೆ ನೀಡಿರುವ ಹಿನ್ನಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ಅಧೀಕ್ಷಕ ಇಂಜಿನಿಯರ್ ಆಗಿ, ಹಾಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಂ. ರವೀಂದ್ರಪ್ಪ ಇವರ ಸೇವೆಯನ್ನು ಸದರಿ ಹೆಚ್ಚುವರಿ ಹುದ್ದೆಯಲ್ಲಿ ದಿನಾಂಕ 7–10–2008 ರಿಂದಲೇ ಪೂರ್ವಾನ್ವಯವಾಗಿ ಈ ಕೆಳಕಂಡಂತೆ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು | ಕಾರ್ಯಭಾರ |
|---|---|---|
| 1 | ಶ್ರೀ ಸಣ್ಣಚಿತ್ತಯ್ಯ,<br>ಅಧೀಕ್ಷಕ ಅಭಿಯಂತರರು | ಬಿಎಸ್‌ಯುಪಿ ಬೆಂಗಳೂರು ಯೋಜನೆಗಳ ಕಾರ್ಯಭಾರದ ಜೊತೆಗೆ ಆಯುಕ್ತರು ವಹಿಸುವ ಇತರೆ ಕಾರ್ಯಭಾರಗಳು. |
| 2 | ಶ್ರೀ ಎಂ. ರವೀಂದ್ರಪ್ಪ,<br>ಅಧೀಕ್ಷಕ ಅಭಿಯಂತರರು (ಯೋಜನೆ ಅವಧಿಗೆ ಸೃಜಿಸಲಾಗಿರುವ ಹುದ್ದೆ) | ಬಿಎಸ್‌ಯುಪಿ ಮೈಸೂರು ಯೋಜನೆಗಳ ಜೊತೆಗೆ ಐಹೆಚ್ಎಸ್‌ಡಿಪಿ ಯೋಜನೆಗಳ ಕಾರ್ಯಭಾರಗಳು ಹಾಗೂ ಆಯುಕ್ತರು ವಹಿಸುವ ಇತರೆ ಕಾರ್ಯಭಾರಗಳು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1606

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಕುಮಾರಿ ರಮ್ಯ ಕೆ.ಟಿ. ಇವರು ಕೃಷಿ ಅಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** 1. ಕೃಷಿ ಆಯುಕ್ತರ ಪತ್ರ ಸಂಖ್ಯೆ: ಕೃಷಿಪ 5/ರಾಜೀನಾಮೆ/61/2008–09, ದಿನಾಂಕ 3–11–2008.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕೃತೋಇ 91 ಕೃಪಸೇ 2006, ದಿನಾಂಕ 30–8–2008 ಮತ್ತು ತಿದ್ದುಪಡಿ ಆದೇಶದ ದಿನಾಂಕ 27–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಕ್ರ.ಸಂ. (2)ರಲ್ಲಿ ಓದಲಾದ ಅಧಿಸೂಚನೆಯನ್ವಯ ಕೃಷಿ ಅಧಿಕಾರಿ ಹುದ್ದೆಗೆ ನೇರ ನೇಮಕಾತಿಗೊಂಡು ದಿನಾಂಕ 30–9–2008ರ ಪೂರ್ವಾಹ್ನದಿಂದ ಉಪ ಕೃಷಿ ನಿರ್ದೇಶಕರ

ಕಚೇರಿ, ರಾಜ್ಯ ಭೂ ಬಳಕೆ ಮಂಡಳಿ, ಬೆಂಗಳೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುವ ಕುಮಾರಿ ರಮ್ಯ ಕೆ.ಟಿ. ಇವರು ದಿನಾಂಕ 30-10-2008ರ ತಮ್ಮ ಮನವಿಯಲ್ಲಿ ಸಿಂಡಿಕೇಟ್ ಬ್ಯಾಂಕಿನಲ್ಲಿ ಪ್ರೊಬೇಷನರಿ ಆಫೀಸರ್ ಹುದ್ದೆಗೆ ನೇಮಕಾತಿ ಆದೇಶ ಬಂದಿದ್ದು, ಸದರಿ ಹುದ್ದೆಗೆ ದಿನಾಂಕ 3-11-2008ರಂದು ಹಾಜರಾಗಬೇಕಾಗಿರುವುದರಿಂದ ತಾವು ಕೃಷಿ ಇಲಾಖೆಯಲ್ಲಿ ಹೊಂದಿರುವ ಕೃಷಿ ಅಧಿಕಾರಿ ಹುದ್ದೆಗೆ ಅವರ ರಾಜೀನಾಮೆಯನ್ನು ದಿ: 31-10-2008ರ ಅಪರಾಹ್ನದಿಂದ ಅನ್ವಯವಾಗುವಂತೆ ಅಂಗೀಕರಿಸಿ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆಂದು ತಿಳಿಸುವುದರ ಜೊತೆಗೆ ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಇರುವುದಿಲ್ಲವೆಂದು ಸಹ ತಿಳಿಸಿ ಮನವಿಯನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 201 ಕೃಪಸೇ 2008, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಕುಮಾರಿ ರಮ್ಯ ಕೆ.ಟಿ., ಕೃಷಿ ಅಧಿಕಾರಿ, ಉಪ ಕೃಷಿ ನಿರ್ದೇಶಕರ ಕಚೇರಿ, ರಾಜ್ಯ ಭೂ ಬಳಕೆ ಮಂಡಳಿ, ಬೆಂಗಳೂರು ಇವರು ತಮ್ಮ ಹುದ್ದೆಗೆ ಸಲ್ಲಿಸಿದ ರಾಜೀನಾಮೆಯನ್ನು ದಿನಾಂಕ 31-10-2008 ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1535

**ಜಿ.ಕೆ. ಗುರಾಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಎನ್.ಆರ್.ಹೆಚ್.ಎಂ. ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರದ ಶೇ. 15ರಷ್ಟು ಪಾಲಿನ ಹಣವನ್ನು ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:** ಅಭಿಯಾನ ನಿರ್ದೇಶಕರು, (ಎನ್‌ಆರ್‌ಹೆಚ್‌ಎಂ), ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೊಸೈಟಿ ಬೆಂಗಳೂರು, ಸ್ವೀಕರಿಸಿರುವ ಏಕ ಕಡತ ಸಂಖ್ಯೆ: ಎನ್.ಆರ್.ಹೆಚ್.ಎಂ. (ಎಸ್‌ಪಿಎಂ.ಯು.) ಜಿಒಐ/107/2008-09.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಏಕ ಕಡತದಲ್ಲಿ ಯೋಜನಾ ನಿರ್ದೇಶಕರು, (ಎನ್‌ಆರ್‌ಹೆಚ್‌ಎಂ) ಬೆಂಗಳೂರು, ರವರು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಭಿಯಾನ (ಎನ್‌ಆರ್‌ಹೆಚ್‌ಎಂ) ಅಡಿಯಲ್ಲಿ ಕೇಂದ್ರ ಸರ್ಕಾರವು 2008-09ನೇ ಸಾಲಿನಲ್ಲಿ ಕರ್ನಾಟಕ ರಾಜ್ಯಕ್ಕೆ 42,465.61 ಲಕ್ಷಗಳನ್ನು ಹಂಚಿಕೆ ಮಾಡಿದೆ. ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದ ಅಡಿಯಲ್ಲಿ ಕೇಂದ್ರ ಸರ್ಕಾರ ಅನುಮೋದಿಸಿ ಹಂಚಿಕೆ ಮಾಡಿದ ಶೇ. 15 ರಷ್ಟು ವಂತಿಗೆ ಅಂದರೆ ರೂ. 6,369.84 ಲಕ್ಷಗಳನ್ನು ರಾಜ್ಯ ಆರೋಗ್ಯ ಸಂಘದ ಬ್ಯಾಂಕಿನ ಲೆಕ್ಕಕ್ಕೆ ವರ್ಗಾಯಿಸಿ ಜಮೇ ಮಾಡಬೇಕು ಅಥವಾ ರಾಜ್ಯ ಆರೋಗ್ಯ ಸಂಘಕ್ಕೆ ಬಿಡುಗಡೆ ಮಾಡುವ ಸಲುವಾಗಿ 2008-09ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಅದಕ್ಕೆ ಅವಕಾಶ ಕಲ್ಪಿಸಬೇಕು. ಸದರಿ ಹಣವನ್ನು ರಾಜ್ಯ ಸರ್ಕಾರವು ತನ್ನ ವಂತಿಗೆಯಿಂದ ಒದಗಿಸಬೇಕಾಗಿದ್ದು ಮತ್ತು 2006-07ನೇ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕ್ಕೆ ನಿಗದಿತ ನಮೂನೆಯಲ್ಲಿ ಲೆಕ್ಕ ಪರಿಶೋಧನೆ ಮಾಡಲ್ಪಟ್ಟ ಉಪಯೋಗಿತ ಪ್ರಮಾಣ ಪತ್ರಗಳನ್ನು ಕಳುಹಿಸಬೇಕೆಂಬ ನಿಭಂದನೆಗೆ ಒಳಪಟ್ಟಿರುತ್ತದೆ. ಅಭಿಯಾನ ನಿರ್ದೇಶಕರು, ಎನ್.ಆರ್.ಹೆಚ್.ಎಂ. ರವರು ಕಳುಹಿಸಿರುವ ಪ್ರಸ್ತಾವನೆಯಲ್ಲಿ ಕೆಳಕಂಡ 4 ಯೋಜನೆಗಳ ಅಡಿಯಲ್ಲಿ ಈಗಾಗಲೇ ರಾಜ್ಯ ಸರ್ಕಾರದ ಆಯವ್ಯಯದಲ್ಲಿ ಒದಗಿಸಿರುವ ಹಣವನ್ನು ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಘ, ಬೆಂಗಳೂರು, ರವರಿಗೆ ಬಿಡುಗಡೆ ಮಾಡಿ ಸದರಿ ಹಣವು ಎನ್.ಆರ್.ಹೆಚ್.ಎಂ. ಅಡಿಯಲ್ಲಿ ರಾಜ್ಯದ ಶೇ. 15ರಷ್ಟು ವಂತಿಗೆಯೆಂದು ಪರಿಗಣಿಸಲು ಪ್ರಸ್ತಾಪಿಸಿರುತ್ತಾರೆ.

ಲಕ್ಷ ರೂ.ಗಳಲ್ಲಿ

| ಕ್ರ.ಸಂ. | ಲೆಕ್ಕಶೀರ್ಷಿಕೆ | ಯೋಜನಾ ವಿವರ | ರಾಜ್ಯ ಆಯವ್ಯಯದಲ್ಲಿ ಒದಗಿಸಿರುವ ಹಣ | ರಾಜ್ಯ ಆರೋಗ್ಯ ಸಂಘಕ್ಕೆ ಬಿಡುಗಡೆ ಆಗಿರುವ ಹಣ |
|---|---|---|---|---|
| 1 | 2210-80-800-0-17 | ತಾಯಿ ಭಾಗ್ಯ | 3000.00 | 3000.00 |
| 2 | 2210-80-800-0-18 | ಇ.ಎಂ.ಆರ್.ಐ. (ಆರೋಗ್ಯ ಕವಚ) | 1000.00 | 1000.00 |
| 3 | 2211-00-103-0-73 | ಮಡಿಲು ಕಿಟ್ಸ್ | 400.00 | 400.00 |
| 4 | 2210-80-800-0-15 | ಸುವರ್ಣ ಸುರಕ್ಷಾ | 2525.81 | 2525.81 |
| | | | **ಒಟ್ಟು** | **6925.81** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 171 ಎಫ್‌ಪಿಆರ್ 2008, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2008.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರವು ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಘ, ಬೆಂಗಳೂರು, ರವರಿಗೆ ರೂ. 22.00 ಕೋಟಿ (ರೂ.ಇಪ್ಪತ್ತೆರಡು ಕೋಟಿಗಳು ಮಾತ್ರ)ಗಳನ್ನು ಎನ್.ಆರ್.ಹೆಚ್.ಎಂ.ಗೆ ರಾಜ್ಯ ಸರ್ಕಾರದ ವಂತಿಗೆಯಾಗಿ ಕೆಳಕಂಡ ಷರತ್ತುಗಳನ್ನು ಪೂರೈಸುವ ನಿಬಂದನೆಗೆ ಒಳಪಟ್ಟು ಅನುಮೋದಿತ ಯೋಜನೆಗಳಿಂದ ಬಿಡುಗಡೆ ಮಾಡಲು ಆದೇಶಿಸಿದೆ.

1. 2210–80–800–0–17 (ತಾಯಿ ಭಾಗ್ಯ) Rs. 1500.00 ಲಕ್ಷಗಳು.
2. 2210–80–800–0–18 (ಇಎಂಆರ್‌ಐ ಆರೋಗ್ಯ ಕವಚ) Rs. 500.00 ಲಕ್ಷಗಳು.
3. 2211–00–103–0–73 (ಮಡಿಲು ಕಿಟ್) Rs. 200.00 ಲಕ್ಷಗಳು.

a) Accounting and auditing function of the society should be improved. Before approaching Finance Department for further release, Audit Report for 2007-08 should be provided.

b) The funds with the society for these three schemes should not exceed requirements for two months. In no case funds should be drawn from the consolidated fund if the same can not be utilized within 2008-09.

c) For 2009-2010 budget the department should identify a specific set of the State Sector Schemes that can accounted towards 15% State's share.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 2061 ವೆಚ್ಚ–5/2008, ದಿನಾಂಕ 22–10–2008ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1532

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ವಿ. ನಾಗಲಕ್ಷ್ಮಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅರೆಹಳ್ಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಒ (2) 112/2008–09, ದಿನಾಂಕ 17–7–2008.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ವಿ. ನಾಗಲಕ್ಷ್ಮಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅರೆಹಳ್ಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ ಇವರು ದಿನಾಂಕ 1–3–2008ರಂದು ಸರ್ಕಾರಿ ಸೇವೆಗೆ ಸೇರಿದ್ದು, ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಬೇಕಾದ ಪ್ರಯುಕ್ತ ದಿನಾಂಕ 6–6–2008 ರಿಂದ ಅನ್ವಯಿಸುವಂತೆ ತಮ್ಮ ಹುದ್ದೆಗೆ ರಾಜೀನಾಮೆ ಸಲ್ಲಿಸಿದ್ದು, ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ. ಹಾಗೂ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿರುವುದಿಲ್ಲವಾದ್ದರಿಂದ ಸದರಿ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 463 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ: ವಿ. ನಾಗಲಕ್ಷ್ಮಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅರೆಹಳ್ಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ 6–6–2008 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1371

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮೈಸೂರಿನ ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು 2008ನೇ ಸಾಲಿನಲ್ಲಿ 100 ವರ್ಷಗಳನ್ನು ಪೂರೈಸುವ ಹಿನ್ನಲೆಯಲ್ಲಿ ಶತಮಾನೋತ್ಸವ ಆಚರಿಸಲು ಸಮಿತಿಯನ್ನು ರಚಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 118 ಪಿಟಿಡಿ 2008, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2008.**

ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮೈಸೂರು 1908ರಲ್ಲಿ ಆರಂಭವಾಗಿ 2008ನೇ ಸಾಲಿನಲ್ಲಿ 100 ವರ್ಷಗಳು ತುಂಬಿರುವ ಹಿನ್ನಲೆಯಲ್ಲಿ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. 2008ರ ಸೆಪ್ಟೆಂಬರ್ ಮಾಹೆಯಲ್ಲಿ ಶತಮಾನೋತ್ಸವನ್ನು ಆಚರಿಸಲು ಉದ್ದೇಶಿಸಲಾಗಿದ್ದು, ಈ ಎಲ್ಲಾ ಕಾರ್ಯಕ್ರಮಗಳು ಸುಗಮವಾಗಿ, ಸುವ್ಯವಸ್ಥಿತವಾಗಿ ಹಾಗೂ ವಿಜೃಂಭಣೆಯಿಂದ ನಡೆಸಬೇಕಾಗಿರುವುದರಿಂದ ಈ ಕಾರ್ಯಕ್ರಮಗಳನ್ನು ಯೋಜಿಸಿ, ನಿರ್ವಹಿಸಲು ಹಾಗೂ ಸಂಯೋಜನೆ, ಆಯುರ್ವೇದ ಸಮ್ಮೇಳನ ಮತ್ತಿತರ ಕಾರ್ಯಕ್ರಮಗಳ ನಿರ್ವಹಣೆಗಾಗಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ರಚಿಸಿದೆ.

| | | |
|---|---|---|
| 1 | ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳು | ಗೌರವಾಧ್ಯಕ್ಷರು |
| 2 | ಕರ್ನಾಟಕ ಸರ್ಕಾರದ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು | ಅಧ್ಯಕ್ಷರು |
| 3 | ಕರ್ನಾಟಕ ಸರ್ಕಾರದ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | ಸದಸ್ಯರು |
| 4 | ಮೈಸೂರು ಜಿಲ್ಲೆಯ ಉಸ್ತುವಾರಿ ಸಚಿವರು | ಸದಸ್ಯರು |
| 5 | ಮೈಸೂರು ಲೋಕಸಭಾ ಸದಸ್ಯರು | ಸದಸ್ಯರು |
| 6 | ಚಾಮರಾಜ ಕ್ಷೇತ್ರದ ಶಾಸಕರು | ಸದಸ್ಯರು |
| 7 | ಮೈಸೂರು ಜಿಲ್ಲೆಯ ವಿಧಾನಸಭೆ/ವಿಧಾನಪರಿಷತ್/ರಾಜ್ಯ ಸಭೆಯ ಎಲ್ಲಾ ಸದಸ್ಯರು | ಸದಸ್ಯರು |
| 8 | ಶ್ರೀ ಶ್ರೀಕಂಠದತ್ತ ಒಡೆಯರ್, ಮಾಜಿ ಲೋಕಸಭಾ ಸದಸ್ಯರು | ಸದಸ್ಯರು |
| 9 | ಕಾರ್ಯದರ್ಶಿಗಳು, ವೈದ್ಯಕೀಯ ಶಿಕ್ಷಣ ಇಲಾಖೆ | ಸದಸ್ಯರು |
| 10 | ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 11 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು | ಸದಸ್ಯರು |
| 12 | ಮೈಸೂರು ಜಿಲ್ಲಾಧಿಕಾರಿಗಳು | ಸದಸ್ಯರು |
| 13 | ಮೈಸೂರು ನಗರಪಾಲಿಕೆ ಮೇಯರ್ | ಸದಸ್ಯರು |
| 14 | ಅಧ್ಯಕ್ಷರು/ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ | ಸದಸ್ಯರು |
| 15 | ವ್ಯವಸ್ಥಾಪಕ ನಿರ್ದೇಶಕರು, ಮೆಸ್ಕಾಂ, ಮೈಸೂರು | ಸದಸ್ಯರು |
| 16 | ಪೊಲೀಸ್ ಆಯುಕ್ತರು, ಮೈಸೂರು ನಗರ | ಸದಸ್ಯರು |
| 17 | ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು | ಸದಸ್ಯರು |
| 18 | ಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ | ಸದಸ್ಯರು |
| 19 | ಕುಲಪತಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು | ಸದಸ್ಯರು |
| 20 | ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಮೈಸೂರು | ಸದಸ್ಯರು |
| 21 | ಐ.ಎಂ.ಎ. ಪ್ರೆಸಿಡೆಂಟ್ (ಮೈಸೂರು ವಿಭಾಗ) | ಸದಸ್ಯರು |
| 22 | ಡೀನ್, ಮೈಸೂರು ಮೆಡಿಕಲ್ ಕಾಲೇಜು | ಸದಸ್ಯರು |
| 23 | ಅಧ್ಯಕ್ಷರು, ಹೆರಿಟೇಜ್ ಸಮಿತಿ, ಮೈಸೂರು | ಸದಸ್ಯರು |
| 24 | ಡಾ: ಚನ್ನಬಸಪ್ಪ, ನಿವೃತ್ತ ನಿರ್ದೇಶಕರು, ಮೈಸೂರು | ಸದಸ್ಯರು |
| 25 | ಡಾ: ಕೆ.ಆರ್. ಶ್ರೀಕಂಠಮೂರ್ತಿ, ನಿವೃತ್ತ ಪ್ರಾಂಶುಪಾಲರು, ಮೈಸೂರು | ಸದಸ್ಯರು |
| 26 | ಡಾ: ಕೆ.ವಿ. ರಾಘವೇಂದ್ರರಾವ್, ನಿವೃತ್ತ ಪ್ರಾಧ್ಯಾಪಕರು, ಮೈಸೂರು | ಸದಸ್ಯರು |
| 27 | ಲೇ ಸೆಕ್ರೆಟರಿ, ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಮೈಸೂರು | ಸದಸ್ಯರು |

| | | |
|---|---|---|
| 28 | ಡಾ: ಎಸ್.ಜಿ. ಮಂಗಲಗಿ, ಪ್ರಾಧ್ಯಾಪಕರು, ಸರ್ಕಾರಿ ಆಯುರ್ವೇದ ಕಾಲೇಜು, ಮೈಸೂರು | ಸಂಘಟನಾ ಕಾರ್ಯದರ್ಶಿ |
| 29 | ಪ್ರಾಚಾರ್ಯರು, ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು, ಮೈಸೂರು | ಸದಸ್ಯ ಕಾರ್ಯದರ್ಶಿ |
| 30 | ಸಂಸ್ಥೆಯ ಹಳೆಯ ವಿದ್ಯಾರ್ಥಿಗಳ ಜಿಲ್ಲಾವಾರು ಪ್ರತಿನಿಧಿಗಳು | ಪ್ರಾಚಾರ್ಯರು ತೀರ್ಮಾನ ತೆಗೆದು ಕೊಳ್ಳಬಹುದು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1513

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಗ್ರಾಅಪ 18 ಎಸ್‌ಜಿವೈ (ಇನ್‌ಪ್ರಾ) 05, ಬೆಂಗಳೂರು, ದಿನಾಂಕ 20–10–2008**

**ವಿಷಯ :** ಬೈಫ್ ಸಂಸ್ಥೆಗಳ ಸೇವಾ ವೆಚ್ಚವನ್ನು ಮುಂದುವರೆಸಿರುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶದ ಸಂ. ಗ್ರಾಅಪ/18/ಎಸ್‌ಇಪಿ (ಇತರೆ) 2005, ದಿನಾಂಕ 20–8–2008.
2. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್, ತುಮಕೂರು ರವರ ಪತ್ರದ ಸಂಖ್ಯೆ ತುಜಿಪಂ/ಡಿಆರ್‌ಡಿಎ/ಎಸ್‌ಜಿಎಸ್‌ವೈ/ಬೈಫ್/54/8, ದಿನಾಂಕ 12–9–2008.
3. ಉಪಾಧ್ಯಕ್ಷರು, ಬೈಫ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ತಿಪಟೂರು ರವರ ಪತ್ರದ ಸಂಖ್ಯೆ: BOK/7PR/ CPC/020/038/ Dt: 24-9-08.
4. ಮುಖ್ಯ ಕಾರ್ಯಕ್ರಮ ಸಂಯೋಜಕರು ಬೈಫ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ತಿಪಟೂರು ರವರ ಪತ್ರದ ಸಂಖ್ಯೆ: : BOK/7PR/ CPC/017/026/ Dt: 28-9-08.

**ಪ್ರಸ್ತಾವನೆ :**

ಉಲ್ಲೇಖ (1)ರ ಸರ್ಕಾರಿ ಆದೇಶದಡಿ ತುಮಕೂರು ಜಿಲ್ಲೆಯ ಗ್ರಾಮಗಳು ಕಿಬ್ಬನಹಳ್ಳಿ, ಎಸ್. ಲಕ್ಕಿಹಳ್ಳಿ ಮತ್ತು ಬೆಂಗರಹಳ್ಳಿ ಎಂದು ನಮೂದಿಸಿ ಬೈಫ್ ಕೇಂದ್ರಗಳಿಗೆ ಸೇವಾ ವೆಚ್ಚವನ್ನು ಪಾವತಿಸಲು ಹಾಗೂ ದಿನಾಂಕ 31–3–2009 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿತ್ತು. ಈ ಗ್ರಾಮಗಳು ತಿಪಟೂರು ತಾಲ್ಲೂಕಿನ ಬೆಳಗರಹಳ್ಳಿ ಮತ್ತು ಶಿರಾ ತಾಲ್ಲೂಕಿನ ಯಲದಬಾಗಿ ಮತ್ತು ಮಾಗೋಡು ಗ್ರಾಮಗಳಾಗಿರುವುದರಿಂದ ಈ ಆದೇಶವನ್ನು ಮಾರ್ಪಡಿಸಿ ಹೊರಡಿಸುವಂತೆ ಉಲ್ಲೇಖ (2)ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ರವರು ಹಾಗೂ ಉಪಾಧ್ಯಕ್ಷರು, ಬೈಪ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ತಿಪಟೂರು ರವರು ಕೋರಿರುತ್ತಾರೆ. ಹಾಗೂ ಉಲ್ಲೇಖ (3)ರ ಪತ್ರದಲ್ಲಿ ಬೈಫ್ ಕೇಂದ್ರಗಳನ್ನು ಐದು ವರ್ಷಗಳ ಅವಧಿಗೆ ಮುಂದುವರೆಸಲು SLRC ಸಭೆಯಲ್ಲಿ ತೀರ್ಮಾನಕೈಗೊಂಡಿರುವುದರಿಂದ, ಅಂತೆಯೇ, ಐದು ವರ್ಷಗಳ ಅವಧಿಯವರೆಗೆ ಮುಂದುವರೆಸಲು ಆದೇಶ ನೀಡಬೇಕಾಗಿ ಮುಖ್ಯ ಕಾರ್ಯಕ್ರಮ ಸಂಯೋಜಕರು ಬೈಫ್ ಗ್ರಾಮೀಣಾಭಿವೃದ್ಧಿ ಸಂಸ್ಥೆರವರು ಉಲ್ಲೇಖ (4)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರದ ಉಲ್ಲೇಖ (1)ರ ಆದೇಶದಲ್ಲಿ ಪ್ರಸ್ತಾಪಿಸಿರುವಂತೆ, ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಬೆಳಗರಹಳ್ಳಿ ಗ್ರಾಮ ಮತ್ತು ಶಿರಾ ತಾಲ್ಲೂಕಿನ ಯಲದಬಾಗಿ ಮತ್ತು ಮಾಗೋಡು ಗ್ರಾಮಗಳು ಎಂದು ಓದಿಕೊಳ್ಳಲು ಹಾಗೂ ಸದರಿ ಬೈಫ್ ಕೇಂದ್ರಗಳಿಗೆ ಸೇವಾ ವೆಚ್ಚವನ್ನು ಪಾವತಿಸಲು ಮತ್ತು ಹಾಲಿ ಇರುವ 72 ಕೃತಕ ಗರ್ಭಧಾರಣಾ ಕೇಂದ್ರಗಳನ್ನು ದಿನಾಂಕ 1–4–08 ರಿಂದ ಐದು ವರ್ಷಗಳ ಅವಧಿಗೆ ಅಂದರೆ, ದಿನಾಂಕ 31–3–2013 ರವರೆಗೆ ಮುಂದುವರೆಸಲು ಆದೇಶಿಸಲಾಗಿದೆ ಎಂದು ಉಲ್ಲೇಖ (1)ರ ಆದೇಶಕ್ಕೆ ತಿದ್ದುಪಡಿ ಮಾಡಲಾಗಿದೆ.

**ಎ.ಎಸ್. ಶ್ರೀಕಾಂತ್**

ಪಿ.ಆರ್. 1531

ಸರ್ಕಾರದ ಕಾರ್ಯದರ್ಶಿ (ಪಂ.ರಾಜ್),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಇಲಾಖೆಯ ಶಿರಸ್ತೇದಾರ್/ ಉಪ ತಹಶೀಲ್ದಾರ್ ವೃಂದದ ನೌಕರರ ರಾಜ್ಯಮಟ್ಟದ ಜೇಷ್ಠತಾ ಪಟ್ಟಿಗೆ ತಿದ್ದುಪಡಿ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಕ್ರಮಾಂಕ ಕಂಇ 496 ಬಿಎಂಎಂ 2005, ದಿನಾಂಕ 24–8–2006.

2. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ 1065/2007ರ ಮೇಲೆ ದಿನಾಂಕ 20–2–2007ರಂದು ನೀಡಿರುವ ಆದೇಶ.

3. ಸರ್ಕಾರಿ ವಕೀಲರು, ಮಾನ್ಯ ಉಚ್ಚ ನ್ಯಾಯಾಲಯರವರ ಪತ್ರ ಸಂಖ್ಯೆ 8522 ಎಜಿ/ಕೆಎಟಿ 2008, ದಿನಾಂಕ 15–9–2008.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕಂದಾಯ ಇಲಾಖೆಯ ಶಿರಸ್ತೇದಾರ್/ಉಪ ತಹಶೀಲ್ದಾರರ ವೃಂದದ ನೌಕರರ ರಾಜ್ಯ ಮಟ್ಟದ ಅಂತಿಮ ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿತ್ತು.

ಶ್ರೀ ಎಸ್.ಡಿ. ಗಣಾಚಾರಿ, ಶಿರಸ್ತೇದಾರ್, ಉಪ ವಿಭಾಗಾಧಿಕಾರಿಗಳ ಕಛೇರಿ, ಬಾಗಲಕೋಟೆ ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ದಾಖಲಿಸಿ ದಿನಾಂಕ 24–8–2006ರ ಅಧಿಸೂಚನೆಯಂತೆ ಸದರಿಯವರಿಗೆ ಕ್ರಮ ಸಂಖ್ಯೆ 5150 ರಲ್ಲಿ ನಿಗಧಿಯಾಗಿರುವ ಜೇಷ್ಠತೆಯಿಂದ ಅನ್ಯಾಯವಾಗಿದೆ ಎಂದು ಜೇಷ್ಠತೆಯನ್ನು ಸದರಿ ಅಧಿಸೂಚನೆಯ ಕ್ರಮ ಸಂಖ್ಯೆ 4511 ಮತ್ತು 4512ರ ನಡುವೆ 4511ಎ ಎಂದು ಮರು ನಿಗಧಿಗೊಳಿಸಲು ಸರ್ಕಾರಕ್ಕೆ ಸೂಕ್ತ ನಿರ್ದೇಶನ ನೀಡುವಂತೆ ಕೋರಿದ್ದರ ಮೇರೆಗೆ ಮಾನ್ಯ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ 1065/2007ನ್ನು ಇತ್ಯರ್ಥಪಡಿಸಿ, ದಿನಾಂಕ 20–2–2007ರಂದು ಈ ಕೆಳಕಂಡಂತೆ ಆದೇಶ ಮಾಡಿರುತ್ತದೆ.

"The notification dated 24-8-06 is quashed in so far as the ranking assigned to the applicant and the private respondents are concerned".

"The respondents are directed to consider the objections filed by the applicant and pass appropriate orders in acordance with law within a period of two months from the date of receipt of certified copy of orders".

ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶದಂತೆ ಅರ್ಜಿದಾರರು ದಿನಾಂಕ 9–11–2005ರಂದು ಸಲ್ಲಿಸಿರುವ ಅರ್ಜಿಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಗೆ ತಿದ್ದುಪಡಿ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 150 ಬಿಎಂಎಂ 2007, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2008.**

ದಿನಾಂಕ 24–8–2006ರಂದು ಪ್ರಕಟವಾದ ರಾಜ್ಯಮಟ್ಟದ ಶಿರಸ್ತೇದಾರ್/ಉಪ ತಹಶೀಲ್ದಾರರ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಸ್.ಡಿ. ಗಣಾಚಾರಿ, ಶಿರಸ್ತೇದಾರ್ ಇವರಿಗೆ ನೀಡಲಾಗಿದ್ದ ಜೇಷ್ಠತಾ ಕ್ರಮ ಸಂಖ್ಯೆ 5150ರ ಬದಲಾಗಿ ಕ್ರಮ ಸಂಖ್ಯೆ 4511–ಎ ಸ್ಥಾನಕ್ಕೆ ಸೇರ್ಪಡೆಗೊಳಿಸಿ ತಿದ್ದುಪಡಿ ಮಾಡಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ರಾಜ್ಯ ಮಟ್ಟದ ಶಿರಸ್ತೇದಾರ್/ ಉಪ ತಹಶೀಲ್ದಾರ್ ಪಟ್ಟಿಯಲ್ಲಿನ ಕ್ರಮಸಂಖ್ಯೆ | ನೌಕರರ ಹೆಸರು | ಡಿ.ಆರ್/ ಪಿ.ಆರ್. | ಜನ್ಮ ದಿನಾಂಕ | ನೌಕರರು ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 4511–ಎ | ಶ್ರೀ ಎಸ್.ಡಿ. ಗಣಾಚಾರಿ | ಪಿ.ಆರ್. | 1–8–1953 | 12–7–1976 | 26–9–1988 | ಶಿರಸ್ತೇದಾರ್ |

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 390 ಸೇನಿಎ 2008, ದಿನಾಂಕ 1–10–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1598

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–1)

**ಒಳಾಡಳಿತ ಸಚಿವಾಲಯ**

ವಿಷಯ: ಶ್ರೀ. ವಿರೂಪಾಕ್ಷಸ್ವಾಮಿ, ಪೊಲೀಸ್ ಸಬ್-ಇನ್ಸ್‌ಪೆಕ್ಟರ್, ಪೊಲೀಸ್ ನೆಲಮಂಗಲ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 06/ಇವಿ/ಸಿಬ್ಬಂದಿ(2)/ 2005-06 ಓ.ಬಿ:20/ 2006-07 ದಿನಾಂಕ: 11/15-05-2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(6)/31/2006-07 ದಿನಾಂಕ: 03-11-2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: -01-2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)145/2006-07, ದಿನಾಂಕ:17-03-2007
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 183, ಸಿಎನ್‌ಎಸ್ 2007 ದಿನಾಂಕ:24-09-2008.

**ಪ್ರಸ್ತಾವನೆ:**

ಶ್ರೀ. ವಿರೂಪಾಕ್ಷಸ್ವಾಮಿ, ಪೊಲೀಸ್ ಸಬ್-ಇನ್ಸ್‌ಪೆಕ್ಟರ್, ಇವರು ಹೊಳಲ್ಕೆರೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನೀವು ಈ ಹಿಂದೆ ಹೊಳಲ್ಕೆರೆ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ್ಗೆ ದಿ: 26-01-2002 ರಂದು ಸಂಜೆ 7.30ರ ಸಮಯದಲ್ಲಿ ಶ್ರೀ.ಬಿ.ಎಸ್.ಅಣ್ಣಪ್ಪ ಬಿನ್ ಬಂಕರೆ ಸಿದ್ದಪ್ಪ, ಸಿವಿಲ್ ಇಂಜಿನಿಯರ್ ಪದವೀಧರ, ಹೊಳಲ್ಕೆರೆ ತಾಲ್ಲೂಕ್ ರವರು ದುಮ್ಮಿ ಬಸ್‌ಸ್ಟಾಂಡ್‌ನಲ್ಲಿ ನಿಂತಿರುವಾಗ್ಗೆ ಜೀಪಿನಲ್ಲಿ ಹೋಗಿ ಸದರಿಯವರನ್ನು ಹೊಡೆದು ಹಲ್ಲೆ ನಡೆಸಿ ಗಾಯವುಂಟು ಮಾಡಿ ಅವಾಚ್ಯ ಶಬ್ದಗಳಿಂದ ನಿಂದಿಸಿರುವುದು.

ದಿ:26-01-2002 ರಂದು ರಾತ್ರಿ 10.30ಗಂಟೆಗೆ ಸದರಿಯವರನ್ನು ಜೀಪಿನಲ್ಲಿ ಕರೆದುಕೊಂಡು ಹೋಗಿ ಠಾಣೆಯಲ್ಲಿ ಕುಳ್ಳಿರಿಸಿದ್ದು, ಈ ಬಗ್ಗೆ ಠಾಣಾ ದಿನಚರಿಯಲ್ಲಿ ನಮೂದನೆ ಇರುವುದಿಲ್ಲ.

ದಿ:26-01-2002 ರಂದು ರಾತ್ರಿ 1.30 ಗಂಟೆಗೆ ಠಾಣೆಗೆ ಬಂದು ಅದೇ ವೇಳೆಗೆ ರಾತ್ರಿಗಸ್ತಿಗೆ ಹೋಗಿರುವುದಾಗಿ ಠಾಣಾ ದಿನಚರಿಯಲ್ಲಿ ಸುಳ್ಳು ನಮೂದನೆ ಮಾಡಿರುವುದು.

ದಿ:26-01-2002 ರಂದು ರಾತ್ರಿ 2.00 ಗಂಟೆ ಸಮಯದಲ್ಲಿ ಸ್ವತ: ತಾವೇ ಠಾಣೆಯಲ್ಲಿ ಹಾಜರಿದ್ದಾಗ್ಯೂ ಸಹ ಸದರಿಯವರನ್ನು ಬೆದರಿಕೆ ಹಾಕಿ ಸದರಿಯವರಿಂದ ಬಲವಂತವಾಗಿ ಸುಳ್ಳು ದೂರು ಅರ್ಜಿ ಪಡೆದು ಠಾಣಾ ಹೆಚ್.ಸಿ.-220, ಸಿದ್ದಲಿಂಗಪ್ಪರವರ ಮುಖಾಂತರ ಠಾಣಾ ಮೊಕದ್ದಮೆ ಸಂಖ್ಯೆ:21/02ನ್ನು ಕಲಂ:324, 323 ರೆ/ವಿ 34 ಐಪಿಸಿ ರೀತ್ಯಾ ಸುಳ್ಳು ಕೇಸನ್ನು ದಾಖಲು ಮಾಡಿಸಿರುವುದು.

ಈ ರೀತಿ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ ಸಾರ್ವಜನಿಕರೊಂದಿಗೆ ಸೌಹಾರ್ದಯುತವಾಗಿ ನಡೆದುಕೊಳ್ಳಬೇಕಾಗಿದ್ದು ಇವರು, ಸಾರ್ವಜನಿಕರೊಬ್ಬರ ಮೇಲೆ ಹಲ್ಲೆ ಮಾಡಿ ಠಾಣೆಯಲ್ಲಿದ್ದಾಗ್ಯೂ ಸಹ ಸುಳ್ಳು ಫಿರ್ಯಾದಿ ಬರೆಸಿಕೊಂಡು ಠಾಣಾ ಹೆಚ್.ಸಿ. ರವರ ಮುಖಾಂತರ ಕೇಸು ದಾಖಲಿಸಿ ಕಾನೂನು ಬಾಹಿರ ಕ್ರಮವನ್ನು ಮಾಡಿ ಠಾಣಾ ದಿನಚರಿಯಲ್ಲಿ ಸುಳ್ಳು ನಮೂದನೆ ಮಾಡುವ ಮೂಲಕ ಕರ್ತವ್ಯದಲ್ಲಿ ಘೋರ ದುರ್ನಡತೆ ಮತ್ತು ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:11/15-05-2006ರ ಆದೇಶದಲ್ಲಿ "ಅರ್ಜಿದಾರರ ವೇತನವನ್ನು ಪೊ.ಸ.ಇ. ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ ಐದು ವರ್ಷಗಳ ಕಾಲ ಕೆಳಗಿಳಿಸಲಾಗಿದೆ ಹಾಗೂ ಅಮಾನತ್ತಿನ ಅವಧಿ 29-01-2002 ರಿಂದ 20-02-2002ರ ವರೆಗೆ ಅಮಾನತ್ತೆಂದೇ ಪರಿಗಣಿಸುವ" ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುವುದರಿಂದ ಶಿಸ್ತುಪ್ರಾಧಿಕಾರದ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಕಂಡು ಬರುವುದಿಲ್ಲವೆಂದು ಹಾಗೂ ಶಿಸ್ತುಪ್ರಾಧಿಕಾರವು ಆರೋಪಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸಿರುವುದುರಿಂದ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 03–11–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರ ವಿರುದ್ಧ ಆರೋಪವು ಸಾಬೀತಾಗಿದೆ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯು ಹೊರಿಸಲಾದ ಆರೊಪಕ್ಕೆ ಹೆಚ್ಚೆಂದು ಕಂಡು ಬಂದಿರುವುದರಿಂದ ಈ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 158 ಪೊಸಿಅ 2007 ಬೆಂಗಳೂರು, ದಿನಾಂಕ: 07ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ವಿರೂಪಾಕ್ಷಸ್ವಾಮಿ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, (ಈ ಹಿಂದೆ ಹೊಳಲ್ಕೆರೆ ಪೊಲೀಸ್ ಠಾಣೆ) ನೆಲಮಂಗಲ ಪೊಲೀಸ್ ಠಾಣೆ, ಇವರಿಗೆ ಶಿಸ್ತುಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಯಾಗದಂತೆ ಎರಡು ವರ್ಷಗಳವರೆಗೆ ಮುಂದೂಡಿ ಆದೇಶಿಸಿದೆ.

ದಿ: 29–01–2002 ರಿಂದ 20–02–2002ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1634

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಜಿ. ವೆಂಕಟಪ್ಪ, ಸಿ.ಎಚ್.ಸಿ.–112, ಚಂದ್ರಶೇಖರಪುರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಆದೇಶ ಸಂಖ್ಯೆ: ಪನ್ನಿ/ 63/2004–05 ಓಬಿ135/2007, ದಿನಾಂಕ: 11–04–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/05/2007–08 ಓಬಿ:12/07–08 ದಿನಾಂಕ: 03/08–09–2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12–12–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)110/2007–08 ದಿನಾಂಕ:26–02–2008
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 20 ಸಿಎನ್‌ಎಸ್ 2008 ದಿನಾಂಕ:03–10–2008

**ಪ್ರಸ್ತಾವನೆ:**

ಶ್ರೀ. ಜಿ. ವೆಂಕಟಪ್ಪ, ಸಿ.ಎಚ್.ಸಿ.–112, ಇವರು ಈ ಹಿಂದೆ ತಿರುಮಣಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನಿಮ್ಮನ್ನು 10–02–2005 ರಂದು ತಿರುಮಣಿ ಠಾಣಾ ವ್ಯಾಪ್ತಿ ವೆಂಕಟಮ್ಮನಹಳ್ಳಿ ಕೆ.ಎಸ್.ಆರ್.ಪಿ. ಕ್ಯಾಂಪಿಗೆ ಕರ್ತವ್ಯಕ್ಕೆ ನಿಯೋಜಿಸಲಾಗಿತ್ತು. ನೀವು ಆ ದಿನ ಅಂದರೆ ದಿ:10–02–2005 ರಂದು ಕೆ.ಎಸ್.ಆರ್.ಪಿ. ಕ್ಯಾಂಪಿನಲ್ಲಿ ರಾತ್ರಿ ಕರ್ತವ್ಯಕ್ಕೆ 8–00 ಗಂಟೆಗೆ ಹಾಜರಾಗಬೇಕಾಗಿದ್ದು, ನೀವು ಸದರಿ ರಾತ್ರಿ ಕರ್ತವ್ಯಕ್ಕೆ

ಹಾಜರಾಗದೇ ದಿ:10–02–2005 ರಿಂದ ದಿನಾಂಕ: 12–02–2005 ರವರೆಗೆ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ಹಾಗೂ ದುರ್ನಡತೆ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 11–04–2007ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಯಾಗದಂತೆ ಮೂರು ವರ್ಷಗಳ ಕಾಲ ಮುಂದೂಡಿ ಅಮಾನತ್ತಿನ ಅವಧಿ ದಿ:15–02–2005 ರಿಂದ 19–06–2005ರ ವರೆಗೆ ಅಮಾನತ್ತೆಂದೇ ಪರಿಗಣಿಸುವ ದಂಡನೆ"ಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 03/08–09–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ದಿನಾಂಕ: 10–02–2005 ರಿಂದ 12–02–2005ರವರೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದು ಸಾಬೀತಾಗಿದೆ. ಆದರೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯು ಹೊರಿಸಲಾದ ಆರೋಪಕ್ಕೆ ಅನುಗುಣವಾಗಿರುವುದಿಲ್ಲವೆಂದು ಕಂಡು ಬಂದಿರುವುದರಿಂದ ಈ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ 5ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 75 ಪೊಸಿಅ 2008 ಬೆಂಗಳೂರು, ದಿನಾಂಕ: 06ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಜಿ. ವೆಂಕಟಪ್ಪ, ಸಿ.ಎಚ್.ಸಿ.–112, (ಈ ಹಿಂದೆ ತಿರುಮಣಿ ಪೊಲೀಸ್ ಠಾಣೆ) ಇವರಿಗೆ ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ತಡೆಹಿಡಿಯುವ ಮತ್ತು ಇವರ ಅಮಾನತ್ತಿನ ಅವಧಿ ದಿ:15–02–2005 ರಿಂದ 19–06–2005ರ ವರೆಗೆ ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1635

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎಂ.ಹೆಚ್.ಎಸ್. ಒಡೆಯರ್, ಪಿ.ಎಸ್.ಐ., ಕೆ.ಟಿ.ಜೆ. ನಗರ ಪೊಲೀಸ್ ಠಾಣೆ, ದಾವಣಗೆರೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)ಇವಿ–2/65/2006 ಓಬಿ:319/ 06–07 ದಿನಾಂಕ: 16–01–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 43/ಅಪೀಲು/ಸಿಬ್ಬಂದಿ–2/ 2006–07 ಓಬಿ:33/ 2006–07 ದಿನಾಂಕ: 23–05–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03–12–2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)122/2007–08 ದಿನಾಂಕ:28–02–2008
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 11 ಸಿಎನ್‌ಎಸ್ 2008 ದಿನಾಂಕ: 04–10–2008

**ಪ್ರಸ್ತಾವನೆ:**

ಶ್ರೀ. ಎಂ.ಹೆಚ್.ಎಸ್. ಒಡೆಯರ್, ಪಿ.ಎಸ್.ಐ., ಕೆ.ಟಿ.ಜೆ. ನಗರ ಪೊಲೀಸ್ ಠಾಣೆಯಲ್ಲಿ ಅಪರಾಧ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ

ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಕೆ.ಟಿ. ಜೆ.ನಗರ ಪೊಲೀಸ್ ಠಾಣೆಯಲ್ಲಿ ಪ್ರಸಕ್ತ ವರ್ಷದಲ್ಲಿ ವರಧಿಯಾದ ಒಟ್ಟು 09 ದ್ವಿಚಕ್ರ ಹಾಗೂ ಲಘುವಾಹನ ಕಳವು ಪ್ರಕರಣಗಳಲ್ಲಿ ಆರೋಪಿ ಮತ್ತು ಮಾಲನ್ನು ಪತ್ತೆ ಮಾಡದ ಆರೋಪ".

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:16-01–2007ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಭವಿಷ್ಯದ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆ"ಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 23–05–2007ರ ಆದೇಶದಲ್ಲಿ ಮೇಲ್ಮನವಿ ಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಆರೋಪವು ಸಾಬೀತಾಗಿದೆ ಆದರೆ ಪರಿಷ್ಕರಣ ಮೇಲ್ಮನವಿದಾರರಿಗೆ ವಿಧಿಸಿದ ದಂಡನೆಯ ಪ್ರಮಾಣವು ಅಧಿಕವಾಗಿದೆ ಎಂದು ಪರಿಗಣಿಸಿ, ಈ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ [5]ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 82 ಪೊಸಿಅ 2008 ಬೆಂಗಳೂರು, ದಿನಾಂಕ: 06ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಎಂ.ಹೆಚ್.ಎಸ್. ಒಡೆಯರ್, ಪಿ.ಎಸ್.ಐ., ಕೆ.ಟಿ.ಜೆ. ನಗರ ಪೊಲೀಸ್ ಠಾಣೆ, ದಾವಣಗೆರೆ, ಇವರಿಗೆ ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಒಂದು ವಾರ್ಷಿಕ ವೇತನ ಮುಂಬಡ್ತಿಯನ್ನು ಒಂದು ವರ್ಷದ ಅವಧಿಗೆ ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1633

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ. ಜಯಮ್ಮ ಕೋಂ ದಿ: ಪುಟ್ಟಯ್ಯ, ಮಾಜಿ ಎ.ಪಿ.ಸಿ.–2015, ಸಿ.ಎ.ಆರ್. (ಕೆಂದ್ರ), ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ) ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/17/2003–04 ದಿನಾಂಕ:08–11–2005
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್. ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:2/ಅಪೀಲು/ 2/2006 ದಿನಾಂಕ: 30–01–2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12–02–2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ ದಿನಾಂಕ:02–08–2008.

**ಪ್ರಸ್ತಾವನೆ:**

ಶ್ರೀಮತಿ. ಜಯಮ್ಮ ಕೋಂ ದಿ: ಪುಟ್ಟಯ್ಯ, ಮಾಜಿ ಎ.ಪಿ.ಸಿ.–2015, ಸಿ.ಎ.ಆರ್. (ಕೆಂದ್ರ), ಬೆಂಗಳೂರು, ಇವರು ದಿವಂಗತರ ಪರವಾಗಿ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದಾರೆ. ಇವರ ವಿರುದ್ದ ಈ ಕೆಳಕಂಡ ಆರೋಪಕ್ಕಾಗಿ ಶ್ರೀ.ಕೆ. ಪುಟ್ಟಯ್ಯ, ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ಪಿ.ಸಿ.–2015 ಕೆ.ಪುಟ್ಟಯ್ಯ, ಸಿ–ವಿಭಾಗ, ಸಿ.ಎ.ಆರ್. ಕೇಂದ್ರ ಬೆಂಗಳೂರು, ಆದ ನೀವು ದಿ:01–12–2001 ರಿಂದ 23–10–2002 ರವರೆಗೆ ಒಟ್ಟು 10 ತಿಂಗಳು 22 ದಿನಗಳು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಪೇದೆಯಾಗಿ ಇತರ ಸಿಬ್ಬಂದಿಗಳಿಗೆ ಮಾದರಿಯಂತೆ ಇರಬೇಕಾಗಿದ್ದ ನೀವು ನಿಮ್ಮ ಕರ್ತವ್ಯದಲ್ಲಿ ಅಶಿಸ್ತು ಮತ್ತು ಬೇಜವಾಬ್ದಾರಿತನವನ್ನು ತೋರಿರುತ್ತೀರಿ.

2) ಪಿ.ಸಿ.–2015 ಕೆ.ಪುಟ್ಟಯ್ಯ, ಸಿ–ವಿಭಾಗ, ಸಿ.ಎ.ಆರ್. ಕೇಂದ್ರ ಬೆಂಗಳೂರು, ಆದ ನೀವು ದಿ:01–12–2001 ರಿಂದ 10–04–2002 ರವರೆಗೆ ರಾಜ್ಯ ಗುಪ್ತ ವಾರ್ತೆಯಲ್ಲಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು ಸದರಿ ರಾಜ್ಯ ಗುಪ್ತವಾರ್ತೆ ಯಿಂದ ದಿ:10–04–2002 ರಂದು ನಿಮ್ಮನ್ನು ಮಾತೃ ಘಟಕವಾದ ಸಿ.ಎ.ಆರ್. ಕೇಂದ್ರಸ್ಥಾನಕ್ಕೆ ವರ್ಗಾವಣೆ ಯಾಗಿದ್ದು, ನೀವು ಮಾತೃ ವಿಭಾಗದಲ್ಲಿ ವರದಿ ಮಾಡಿಕೊಳ್ಳದೆ ಅಂದಿನಿಂದ ದಿ:23–10–2002 ರವರೆಗೆ ಗೈರುಹಾಜರಿಯಲ್ಲಿಯೇ ಮುಂದುವರೆದಿರುತ್ತೀರಿ.

3) ಪಿ.ಸಿ.–2015 ಕೆ.ಪುಟ್ಟಯ್ಯ, ಸಿ–ವಿಭಾಗ, ಸಿ.ಎ.ಆರ್. ಕೇಂದ್ರ ಬೆಂಗಳೂರು, ಆದ ನೀವು ಕರ್ತವ್ಯಕ್ಕೆ ಗೈರುಹಾಜರಾಗುವ ಮುನ್ನ ನಿಮಗೆ ಆರೋಗ್ಯ ಸರಿಯಿಲ್ಲದಿದ್ದಲ್ಲಿ ನೀವು ರಾಜ್ಯ ಗುಪ್ತವಾರ್ತೆ ಯಲ್ಲಿ ಅನಾರೋಗ್ಯದ ಬಗ್ಗೆ ವಿಷಯವನ್ನು ತಿಳಿಸಿ ಎಂ.ಹೆಚ್.ಎಸ್. ಪುಸ್ತಕ ಮತ್ತು ರಹದಾರಿ ಪತ್ರವನ್ನು ಪಡೆಯಬಹುದಾಗಿತ್ತು. ಅಲ್ಲದೆ ನೀವು ದೂರವಾಣಿ ಮೂಲಕವಾಗಲಿ ಅಥವಾ ತಂತಿ ಸಂದೇಶದ ಮೂಲಕವಾಗಲಿ ಕಛೇರಿಗೆ ತಿಳಿಸಬಹುದಿತ್ತು. ಆದರೆ ನೀವು ಈ ರೀತಿಯಲ್ಲಿ ಮಾಡದೆ ಏಕಾಏಕಿಯಾಗಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿ ನಿಮ್ಮ ಕರ್ತವ್ಯದಲ್ಲಿ ಅಶಿಸ್ತು ಬೇಜವಾಬ್ದಾರಿತನ ಹಾಗೂ ಕರ್ತವ್ಯ ನಿರ್ಲಕ್ಷತೆಯನ್ನು ಮಾಡಿರುವುದು ಎತ್ತಿ ತೋರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 08–11–2005ರ ಆದೇಶದಲ್ಲಿ "ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ದಿನಾಂಕ: 01–12–2001 ರಿಂದ 23–10–2002ರ ವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವ ಅವಧಿಯನ್ನು ವೇತನ ರಹಿತ ರಜೆ" ಎಂದು ಪರಿಗಣಿಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್. ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 30–01–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ದಿವಂಗತರ ಪತ್ನಿಯಾದ ಶ್ರೀಮತಿ. ಜಯಮ್ಮನವರು ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಹೊಸ ಅಂಶಗಳು ಇರುವುದಿಲ್ಲವಾದ್ದರಿಂದ ಹಾಗೂ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 292 ಪೊಸಿಅ 2008 ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ. ಜಯಮ್ಮ ಕೋಂ ದಿ: ಪುಟ್ಟಯ್ಯ, ಮಾಜಿ ಎ.ಪಿ.ಸಿ.–2015, ಸಿ.ಎ.ಆರ್. ಕೇಂದ್ರ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1610

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಬಿ.ಡಿ. ಡಿಸೋಜ, ಡಿವೈ.ಎಸ್.ಪಿ. ರಾಜ್ಯ ಗುಪ್ತವಾರ್ತೆ, ಹುಬ್ಬಳ್ಳಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಇಎಸ್‌ಟಿ:3:22:ಪವ:2001/ಓಬಿ/89/2001–02 ದಿನಾಂಕ:23–03–2002
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ8/25/2002–03 ದಿನಾಂಕ:07–04–2003
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:24–08–2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)25/2002–03 ದಿನಾಂಕ:21–08–2008

**ಪ್ರಸ್ತಾವನೆ:**

ಶ್ರೀ. ಬಿ.ಡಿ. ಡಿಸೋಜ, ಡಿವೈ.ಎಸ್.ಪಿ. ರಾಜ್ಯ ಗುಪ್ತವಾರ್ತೆ, ಹುಬ್ಬಳ್ಳಿ, ಇವರು ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಮುಂಡಗೋಡು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ದಿ:22–07–2001 ರಂದು ಸುಮಾರು 12.00ಗಂಟೆಗೆ ಧಾರವಾಡದ ಶ್ರೀ.ಎನ್.ವೈ.ಉಳ್ಳಾಗಡ್ಡಿ ವಕೀಲರಾದ ಶ್ರೀ.ಬಿ.ಸಿ.ಜಂಬಗಿ, ದಿ: 15–07–2001 ರಂದು ರಾತ್ರಿ ಮುಂಡಗೋಡ ಠಾಣಾ ಮಿತಿಯಲ್ಲಿ ಬೈಕ್ ಸ್ಕಿಡ್ ಆಗಿ ಅಪಘಾತಕ್ಕೊಳಗಾಗಿ ಗಾಯಗೊಂಡು ಹುಬ್ಬಳ್ಳಿಯ ಆಸ್ಪತ್ರೆಗೆ ದಾಖಲಾದ ಗಾಯಾಳು ಪ್ರಕಾಶ್ ಸಹದೇವಪ್ಪ ದೊಡ್ಡವಾಡ, ರವರ ತಂದೆ ಶ್ರೀ.ಸಹದೇವಪ್ಪ ವಾಲ್ಮೀಕಿ ಹಾಗೂ ಕಾನೂನು ಪದವೀಧರ ಸೋಮಶೇಖರ ಜಾಡರ, ರವರು ಅಪಘಾತದ ಬಗ್ಗೆ ಫಿರ್ಯಾಧಿ ನೀಡಲು ಮುಂಡಗೋಡ ಠಾಣೆಗೆ ಬಂದಿದ್ದು, ಠಾಣೆಯ ಎ.ಎಸ್.ಐ. ಶ್ರೀ.ಬಿ.ಡಿ. ಮಾದರಿ ರವರು ಅವರನ್ನು ನಿಮ್ಮ ನಿವಾಸಕ್ಕೆ ಕರೆದೊಯ್ದಿರುವರು. ಆ.ಪೊ.ಅ. ಶ್ರೀ.ಬಿ.ಡಿ.ಡಿಸೋಜ, ಪಿ.ಐ., ಮುಂಡಗೋಡ ಠಾಣೆ ಆದ ನೀವು ಸದರಿಯವರಿಂದ ದೂರನ್ನು ಅದೇ ದಿನ ಪಡಕೊಂಡು ಕೂಡಲೇ ಕಾನೂನು ಕ್ರಮ ಜರುಗಿಸದೆ, ಕರ್ತವ್ಯಲೋಪವೆಸಗಿ ದಿ:18–08–2001 ರಂದು ಸ್ವತ: ಗಾಯಾಳು ಠಾಣೆಗೆ ಹಾಜರಾಗಿ ದೂರು ಕೊಟ್ಟ ನಂತರವೇ ಕ್ರಮ ಜರುಗಿಸಿರುವಿರಿ.
2) ದಿ:22–07–2001 ರಂದು ನಿಮ್ಮ ಮುಂದೆಯೇ, ಶ್ರೀ.ಎಸ್.ಜಿ.ಗಸ್ತಿ ಪಿ.ಎಸ್.ಐ. ಮುಂಡಗೋಡ ಠಾಣೆ ರವರು ಮೇಲ್ಕಂಡ ಅರ್ಜಿದಾರರೊಂದಿಗೆ ಅಸಭ್ಯ ರೀತಿಯಿಂದ ವರ್ತಿಸಿ ದುರ್ನಡತೆ ತೋರಿದ್ದರೂ ಮತ್ತು ದಿ: 15–07–2001 ರಂದು ಅಪಘಾತದ ಬಗ್ಗೆ ಪಿರ್ಯಾದಿ ನೀಡಲು ಠಾಣೆಗೆ ಬಂದಿದ್ದ ಗಾಯಾಳುವಿನ ಸ್ನೇಹಿತ ಶ್ರೀ.ಮಹೇಶ ಗಾಡ ಪನ್ನಿಗಟ್ಟಿ ಹಾಗೂ ರಾಮುಮಾಳಪ್ಪನವರಲ್ಲಿ ಇದಕ್ಕೆ ರೂ. 10,000/– ಖರ್ಚಾಗುತ್ತದೆಯೆಂದು ಹೇಳಿ ಕರ್ತವ್ಯದಲ್ಲಿ ತೀವ್ರ ದುರ್ನಡತೆ ತೋರಿದ ಸಿಪಿಸಿ–1023, ಶ್ರೀ.ಎಸ್.ಜಿ.ರಾಣೆ ರವರ ವಿರುದ್ಧ ಠಾಣೆಯ ಜವಾಬ್ದಾರಿಯುತ ಪಿ.ಐ. ಆಗಿರುವ ನೀವು ಯವುದೇ ಕ್ರಮ ಜರುಗಿಸದೆ ಕರ್ತವ್ಯ ಲೋಪವೆಸಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 23–03–2002ರ ಆದೇಶದಲ್ಲಿ "ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮೂರು ತಿಂಗಳ ಕಾಲ ಅವರ ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು" ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:07–04–2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ಹೊಸದಾದ ಸಮರ್ಥನೀಯ ಕಾರಣಗಳನ್ನು ಪರಿಷ್ಕರಣ ಮೇಲ್ಮನವಿಯಲ್ಲಿ

ಒದಗಿಸಿರುವುದಿಲ್ಲವಾದ್ದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 299 ಪೊಸಿಅ 2008 ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಬಿ.ಡಿ. ಡಿಸೋಜ, ಡಿವೈ.ಎಸ್.ಪಿ. ರಾಜ್ಯ ಗುಪ್ತವಾರ್ತೆ, ಹುಬ್ಬಳ್ಳಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1613

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಚಿಕ್ಕಮಗಳೂರು ಜಿಲ್ಲೆಯಲ್ಲಿ ಮೆ: ಅರ್ಜುನ್, ಗ್ರಾಮೀಣಾಭಿವೃದ್ಧಿ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ ಚಿಕ್ಕಮಗಳೂರು ಇವರು ಜಿಲ್ಲಾ ಪಂಚಾಯತ್ ಸಹಯೋಗದೊಂದಿಗೆ ಸಿದ್ಧ ಉಡುಪು ಮತ್ತು ತರಬೇತಿ ಕೇಂದ್ರವನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ರವರ ಪತ್ರದ ಸಂ: ಜಿಪಂಚಿ/ಡಿಆರ್‌ಡಿಎ–1/ಸಿಆರ್31/07–08, ದಿನಾಂಕ 22–8–2008.
2. ಸರ್ಕಾರದ ಕಾರ್ಯದರ್ಶಿಗಳು, ಗ್ರಾಅಪಂರಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 4–10–2008 ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಕೃಷಿ ನಂತರ ಹೆಚ್ಚಿನ ಉದ್ಯೋಗ ಒದಗಿಸುವ ಕ್ಷೇತ್ರ ಜವಳಿ ವಲಯವಾಗಿದೆ. ಸಿದ್ಧ ಉಡುಪು ಕೈಗಾರಿಕೆಗಳು ಬೆಂಗಳೂರಿನಲ್ಲಿ ಮಾತ್ರ ಕೇಂದ್ರೀಕೃತವಾಗಿದ್ದು, ಉಳಿದ ಜಿಲ್ಲೆಗಳಲ್ಲಿ ಸಿದ್ಧ ಉಡುಪು ತಯಾರಿಕೆಯಲ್ಲಿ ನುರಿತ ಕೆಲಸಗಾರರು ಸಿಗದ ಪ್ರಯುಕ್ತ ಸಿದ್ಧ ಉಡುಪು ಘಟಕಗಳು ವಿವಿಧ ಜಿಲ್ಲೆಗಳಲ್ಲಿ ಸ್ಥಾಪನೆಯಾಗುತ್ತಿಲ್ಲ. ವಿವಿಧ ಜಿಲ್ಲೆಗಳಲ್ಲಿ ಸಿದ್ಧ ಉಡುಪು ಘಟಕಕ್ಕೆ ಅವಶ್ಯವಿರುವ ನುರಿತ ಕೆಲಸಗಾರರನ್ನು ತಯಾರು ಮಾಡುವುದು ಹಾಗೂ ಜಿಲ್ಲೆಯಲ್ಲಿ ಸಿದ್ಧ ಉಡುಪು ಉದ್ಯಮಕ್ಕೆ ಬೇಡಿಕೆ ಸೃಷ್ಟಿಸುವುದು ಅವಶ್ಯವಿರುತ್ತದೆ ಹಾಗೂ ಎಸ್‌ಜಿಎಸ್‌ವೈ ಯಡಿ ಸ್ವ ಉದ್ಯೋಗ ಸೃಷ್ಟಿಸುವುದು ಅವಶ್ಯವಿರುತ್ತದೆ. ರಾಜ್ಯ ಸರ್ಕಾರವು, ಪ್ರತಿಷ್ಠಿತ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳ ಸಹಯೋಗದೊಂದಿಗೆ ತರಬೇತಿಯನ್ನು ಪ್ರಾರಂಭಿಸುವ ಉದ್ದೇಶ ಹೊಂದಿರುತ್ತದೆ. ಮೇ: ಅರ್ಜುನ್ ಗ್ರಾಮೀಣಾಭಿವೃದ್ಧಿ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ, ಚಿಕ್ಕಮಗಳೂರು ಇವರು ಚಿಕ್ಕಮಗಳೂರು ಜಿಲ್ಲೆಯಲ್ಲಿ ಎಟಿಡಿಸಿ ಮಾದರಿಯ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಘಟಕವನ್ನು ಸ್ಥಾಪಿಸಲು ಪ್ರಸ್ತಾವನೆಯನ್ನು ಜಿಲ್ಲಾ ಪಂಚಾಯತ್‌ಗೆ ಸಲ್ಲಿಸಿದ್ದು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಇವರು ಸದರಿ ಸಂಸ್ಥೆ ಮಾರಕ ರೋಗಗಳನ್ನು ನಿಯಂತ್ರಿಸುವ ಔಷಧಿಗಳನ್ನು ಸಂಶೋಧಿಸಿ ನಡೆಸುವ ಒಂದು ಸರ್ಕಾರೇತರ ಸಂಸ್ಥೆಯಾಗಿದ್ದು, ನಿರುದ್ಯೋಗಿ ಯುವಜನರಿಗೆ ಉದ್ಯೋಗ ನೀಡಿ ಕಾರ್ಯ ಪ್ರವೃತ್ತರಾಗಿದ್ದು, ಈ ಸಂಸ್ಥೆಯು ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದು, ಈ ಸಂಸ್ಥೆಯ ಸಹಯೋಗದೊಂದಿಗೆ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರವನ್ನು ಜಿಲ್ಲೆಯಲ್ಲಿ ಸ್ಥಾಪಿಸಬಹುದೆಂದು ಓದಲಾಗಿದೆ (1)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ದಿನಾಂಕ 4–10–2008ರಂದು ಸರ್ಕಾರದ ಕಾರ್ಯದರ್ಶಿಗಳು, ಗ್ರಾಅಪಂರಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಂಡಿಸಿ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರ ಸ್ಥಾಪಿಸಲು ಹಾಗೂ ರೂ. 20.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಅನುಮೋದನೆ ಪಡೆಯಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 11 ಎಸ್‌ಜಿವೈ (ಎನ್‌ಪ್ರಾ) 2008 ಬೆಂಗಳೂರು, ದಿನಾಂಕ: 3ನೇ ನವೆಂಬರ್ 2008.**

ರಾಜ್ಯ ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಮೆ: ಅರ್ಜುನ್ ಗ್ರಾಮೀಣಾಭಿವೃದ್ಧಿ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ, ಐಜಿ ರಸ್ತೆ, 3ನೇ ಅಡ್ಡರಸ್ತೆ, ಚಿಕ್ಕಮಗಳೂರು ಮತ್ತು ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ರವರುಗಳ ಸಹಯೋಗದೊಂದಿಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರ ಸ್ಥಾಪಿಸಲು ಮತ್ತು ಈ ಕೇಂದ್ರಕ್ಕೆ ಯಂತ್ರೋಪಕರಣ, ಪೀಠೋಪಕರಣ ಮತ್ತು ವಿದ್ಯುಚ್ಛಕ್ತಿ ಸಂಪರ್ಕಕ್ಕಾಗಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್

ಯೋಜನೆಯ ಮೂಲಭೂತ ಸೌಕರ್ಯ ನಿಧಿಯಿಂದ ರೂ. 20.00 ಲಕ್ಷ (ರೂ. ಇಪ್ಪತ್ತು ಲಕ್ಷ ಮಾತ್ರ) ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು:**

1) ಯಂತ್ರೋಪಕರಣ, ಪೀಠೋಪಕರಣ ಹಾಗೂ ವಿದ್ಯುಚ್ಛಕ್ತಿ ಸಂಪರ್ಕಕ್ಕಾಗಿ ರೂ. 20.00 ಲಕ್ಷ (ರೂ. ಇಪ್ಪತ್ತು ಲಕ್ಷ ಮಾತ್ರ) ಅಥವಾ ನೈಜ ವೆಚ್ಚವನ್ನು ಮಾತ್ರ ಪಾವತಿಸುವುದು. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಭರಿಸತಕ್ಕದ್ದು.

2) ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಜಿಲ್ಲೆಯವರು ಅನುದಾನ ಬಿಡುಗಡೆ ಮಾಡುವ ಮೊದಲು ಸಂಸ್ಥೆಯವರು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರಬೇಕು.

   ಅ) ತರಬೇತಿ ಸಂಸ್ಥೆ ನಡೆಸಲು ಅವಶ್ಯವಿರುವ ಸ್ವಂತ ಕಟ್ಟಡ/ಬಾಡಿಗೆ ಅಥವಾ ಲೀಸ್ ಆಧಾರದ ಮೇಲಿನ ಕಟ್ಟಡ ಸಂಸ್ಥೆಯ ಹೆಸರಿನಲ್ಲಿರಬೇಕು. ತರಬೇತಿ ಕೇಂದ್ರವು 4000 ಚ.ಅಡಿ ಸ್ಥಳಾವಕಾಶ ಹೊಂದಿರಬೇಕು.

   ಆ) ಈ ಕಟ್ಟಡದಲ್ಲಿ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಮಹಿಳೆಯರಿಗೆ ಹಾಗೂ ಪುರುಷರಿಗೆ ಪ್ರತ್ಯೇಕ ಶೌಚಾಲಯ ಹೊಂದಿರಬೇಕು.

   ಇ) ತರಬೇತಿ ನಡೆಸಲು ಅವಶ್ಯವಿರುವ 20 ಹೆಚ್.ಪಿ ವಿದ್ಯುತ್ ಲಭ್ಯವಿರುವ/ಮಂಜೂರಾಗಿರುವ ಬಗ್ಗೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಸಂಸ್ಥೆಯವರು ದೃಢೀಕರಣ ಪತ್ರ ಪಡೆದಿರಬೇಕು.

   ಈ) ತರಬೇತಿ ನಡೆಸಲು ಅವಶ್ಯವಿರುವ ತರಬೇತುದಾರರನ್ನು ನೇಮಕಮಾಡಿಕೊಂಡಿರಬೇಕು/ಸ್ಥಳೀಯವಾಗಿ ತರಬೇತಿ ನೀಡಲು ಇಚ್ಛಿಸುವವರನ್ನು ಟಿಓಟಿ (training of triners) ತರಬೇತಿಗಾಗಿ ಎಟಿಡಿಸಿ, ಬೆಂಗಳೂರು/ಐಎಲ್ಎಫ್ಎಸ್ ಅಥವಾ ಇತರೆ ಪ್ರತಿಷ್ಠಿತ ಸಂಸ್ಥೆಗೆ ನಿಯೋಜಿಸಬೇಕು.

3) ತರಬೇತಿ ಕೇಂದ್ರವನ್ನು ನವೆಂಬರ್ 2008ರಲ್ಲಿ ಪ್ರಾರಂಭಿಸಲು ಅವಶ್ಯವಿರುವ ಎಲ್ಲಾ ಪೂರ್ವ ಸಿದ್ಧತೆಗಳನ್ನು ಮಾಡಿಕೊಳ್ಳುವುದು.

4) ತರಬೇತಿ ಕೇಂದ್ರವನ್ನು ಪ್ರಾರಂಭಿಸಲು ಅಂದಾಜು ವೆಚ್ಚ, ಅಗತ್ಯವಿರುವ ಯಂತ್ರೋಪಕರಣಗಳು, ಪೀಠೋಪಕರಣಗಳು, ಸಲಕರಣೆಗಳು ಮತ್ತು ವಿದ್ಯುತ್ ಸಲಕರಣೆಗಳ ಬಗ್ಗೆ ವಿವರಗಳನ್ನು ಅನುಬಂಧ–ಎ ರಲ್ಲಿ ಮತ್ತು ಸಂಸ್ಥೆಯ ಸಿಬ್ಬಂದಿ ವಿವರಗಳನ್ನು ಅನುಬಂಧ–ಬಿ ರಲ್ಲಿ ವಿವರಿಸಲಾಗಿದೆ.

5) ಯಂತ್ರೋಪಕರಣ ಖರೀದಿಯಲ್ಲಿ ಪಾರದರ್ಶಕ ಕಾಯಿದೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವುದು.

6) ಯಂತ್ರೋಪಕರಣಗಳ ವೆಚ್ಚವನ್ನು ಎಸ್‌ಜಿಎಸ್‌ವೈ ಮೂಲಭೂತ ಸೌಕರ್ಯ ನಿಧಿಯಿಂದ ಭರಿಸುವುದು. ಈ ಯಂತ್ರೋಪಕರಣಗಳು ಜಿಲ್ಲಾ ಪಂಚಾಯತಿ, ಚಿಕ್ಕಮಗಳೂರು ಇದರ ಆಸ್ತಿಯಾಗಿದ್ದು ರಿಜಿಸ್ಟರ್‌ನಲ್ಲಿ ದಾಖಲೆ ಮಾಡುವುದು.

7) ಎಸ್‌ಜಿಎಸ್‌ವೈ ಯೋಜನೆಯ ಮೂಲಭೂತ ಸೌಕರ್ಯದಡಿ ಯಂತ್ರೋಪಕರಣಗಳನ್ನು ನೀಡಲಾಗುತ್ತಿದ್ದು ಸಂಸ್ಥೆಯವರು ಅನಿವಾರ್ಯ ಕಾರಣದಿಂದ ತರಬೇತಿ ಕೇಂದ್ರವನ್ನು ಸ್ಥಗಿತಗೊಳಿಸಿದರೆ ಯಂತ್ರೋಪಕರಣವನ್ನು ಬೇರೆ ಕೇಂದ್ರಕ್ಕೆ ವರ್ಗಾಯಿಸುವ ಅಥವಾ ಸದರಿ ಸಂಸ್ಥೆಯ ಕಟ್ಟಡದಲ್ಲಿಯೇ ಬಾಡಿಗೆಯ ಆಧಾರದ ಮೇಲೆ ನಡೆಸುವ ಅಧಿಕಾರ ಜಿಲ್ಲಾ ಪಂಚಾಯತಿಗಿರುತ್ತದೆ. ಇದರ ಬಗ್ಗೆ ಎಲ್ಲಾ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

8) ಕೇಂದ್ರ ಪ್ರಾರಂಭ ಆದ ನಂತರ "ಜಿಲ್ಲಾ ಪಂಚಾಯತ್, ಶಿವಮೊಗ್ಗ ಸಹಯೋಗದೊಂದಿಗೆ ಸ್ಥಾಪಿಸಲ್ಪಟ್ಟ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರ" ವೆಂದು ನಾಮಫಲಕ ಹಾಕುವುದು.

9) ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರದ ಭೂಮಿ ಮತ್ತು ಕಟ್ಟಡಕ್ಕೆ ಅನುದಾನ ನೀಡಲು ಅವಕಾಶವಿರುವುದಿಲ್ಲ.

10) ಸಿದ್ಧ ಉಡುಪು ಮತ್ತು ತರಬೇತಿ ಉತ್ಪಾದನಾ ಕೇಂದ್ರವನ್ನು ಕನಿಷ್ಠ 10 ವರ್ಷ ಸ್ವಯಂ ಸೇವಾ ಸಂಸ್ಥೆಗಳು ಕಡ್ಡಾಯವಾಗಿ ನಡೆಸಬೇಕು.

11) ಸ್ವಯಂ ಸೇವಾ ಸಂಸ್ಥೆಯ ಸ್ವಂತ ಕಟ್ಟಡಕ್ಕೆ ಬಾಡಿಗೆಯನ್ನು ಹಾಕತಕ್ಕದ್ದಲ್ಲ.

12) ಈ ತರಬೇತಿ ಮತ್ತು ಉತ್ಪಾದನಾ ಕೇಂದ್ರವು ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್ (ATDC), ಬೆಂಗಳೂರು ಇವರು ಅಳವಡಿಸಿದ 1) ಪಠ್ಯಕ್ರಮ 2) ಯಂತ್ರೋಪಕರಣ 3) ತರಬೇತಿಯ ಗುಣಮಟ್ಟವನ್ನು ಬೆಂಚ್ ಮಾರ್ಕ್ ಆಗಿ ಇಟ್ಟುಕೊಂಡು ಈ ಮಾದರಿಯಲ್ಲಿ ತರಬೇತಿ ಕೇಂದ್ರವನ್ನು ಸ್ಥಾಪಿಸತಕ್ಕದ್ದು.

13) ಈ ಕಟ್ಟಡ ನಿರ್ವಹಣೆಗಾಗಿ ಆವರ್ತಕ ವೆಚ್ಚವನ್ನು ಕಪಾರ್ಟ ಸಂಸ್ಥೆಯಿಂದ ಪಡೆಯುವುದು. ಆವರ್ತಕ ವೆಚ್ಚಕ್ಕಾಗಿ ಎಸ್.ಜಿ.ಎಸ್.ವೈ. ಫಲಾನುಭವಿಗಳಿಗೆ ಎಸ್.ಜಿ.ಎಸ್.ವೈ. ತರಬೇತಿ ನಿಧಿಯಿಂದ ಮತ್ತು ಇತರ ಫಲಾನುಭವಿಗಳಿಗೆ ಆಯಾ ಇಲಾಖೆಯವರು ನೀಡುವ ಗೌರವ ಧನದಿಂದ ಪಡೆಯುವುದು.

14) ತರಬೇತಿಯ ಗೌರವಧನಕ್ಕಿಂತ ಆವರ್ತಕ ವೆಚ್ಚ ಹೆಚ್ಚಾದಲ್ಲಿ ಉಳಿದ ಹಣವನ್ನು ಸಂಸ್ಥೆಯವರೇ ಭರಿಸುವುದು.

15) ಸದರಿ ತರಬೇತಿ ಮತ್ತು ಉತ್ಪದಾನಾ ಕೇಂದ್ರದಲ್ಲಿ ಡಾ: ಅಂಬೇಡ್ಕರ್ ಅಭಿವೃದ್ಧಿ ನಿಗಮ, ಡಿ. ದೇವರಾಜ ಅರಸ್ ಅಭಿವೃದ್ಧಿ ನಿಗಮ, ಕೈಮಗ್ಗ ಮತ್ತು ಜವಳಿ ಇಲಾಖೆ, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಫಲಾನುಭವಿಗಳು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಫಲಾನುಭವಿಗಳು ಹಾಗೂ ಇತರೆ ಇಲಾಖೆಯ ಯೋಜನೆಗಳಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ತರಬೇತಿ ನೀಡುವುದು. ಇತರೆ ಅಭ್ಯರ್ಥಿಗಳಿಗೆ ತರಬೇತಿ ನೀಡಲು ತರಬೇತಿ ಅವಧಿಯನ್ನು ಹಾಗೂ ತರಬೇತಿಯ course fee ಯನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಜೊತೆ ಸೇರಿ ನಿರ್ಧರಿಸುವುದು.

16) ಸಂಸ್ಥೆಗೆ ಬೇಕಾದ ಸಿಬ್ಬಂದಿಯನ್ನು ತಾಂತ್ರಿಕ ನೈಪುಣ್ಯತೆಯ ಆಧಾರದ ಮೇಲೆ ನೇಮಿಸುವ ಜವಾಬ್ದಾರಿ ಜಿಲ್ಲಾ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಯದಾಗಿರುತ್ತದೆ.

17) ಪ್ರತಿ ತಿಂಗಳು ಕನಿಷ್ಠ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವುದು.

18) ಜಿಲ್ಲಾ ಮಟ್ಟದಲ್ಲಿ ಉಸ್ತುವಾರಿ ಸಮಿತಿಯನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇವರ ಅಧ್ಯಕ್ಷತೆಯಲ್ಲಿ ರಚನೆ ಮಾಡಲಾಗಿದೆ. ಈ ಸಮಿತಿಯು ಪ್ರತಿ ತಿಂಗಳು ಪ್ರಗತಿ ಪರಿಶೀಲನಾ ಸಭೆ ನಡೆಸುವುದು.

19) ತರಬೇತಿ ಸಂಸ್ಥೆಯ ಆದಾಯ ಮತ್ತು ಖರ್ಚನ್ನು ಪ್ರತ್ಯೇಕವಾಗಿ ನಿರ್ವಹಿಸುವುದು.

20) ಈ ಕೇಂದ್ರವು ಮುಖ್ಯ ಮಾತೃ ಕೇಂದ್ರವಾಗಿ ನಿರ್ವಹಿಸಿ ಜಿಲ್ಲೆಯಲ್ಲಿ ಉಪ ಉತ್ಪಾದನಾ ಕೇಂದ್ರಗಳನ್ನು (ancillary unit) ಜಿಲ್ಲೆ ಸ್ಥಾಪಿಸಲು ಕ್ರಮವಹಿಸುವುದು.

ಮೇಲಿನ ಎಲ್ಲಾ ಷರತ್ತುಗಳನ್ನು ಒಳಗೊಂಡಂತೆ ಮೆ: ಅರ್ಜುನ್ ಗ್ರಾಮೀಣಾಭಿವೃದ್ಧಿ ಸಂಸ್ಥೆ ಮತ್ತು ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಒಡಂಬಡಿಕೆ ಮಾಡಿಕೊಂಡು ಅದರ ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು, (ಸ್ವಉಕಾ) ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Annexure – A**

**Details of Machinery & Equipments**

| Sl. No. | Details | Make & Specifications | No.s | Amount (Approximate) |
|---|---|---|---|---|
| 1 | Power operated High speed SNLS Sewing Machine | JUKI Company Model No. DDL-8300 | 35 | 6,02,000 |
| 2 | Specialised Machines | | | |
| a | High Speed Single Needle Lock stich Button holing Machine | Juki Company Model No. LBH-781 U | | |
| b | High Speed Direct Drive Button Sewing Machine | Juki Company LK-1903 ASS | | |
| c | High Speed Direct Drive Bar tacking Machine (Computer Controlled) | Juki Company LK-1900 ASS | | |
| d | Two Needle Lock stitch, Fixed Needle Bar Machine | Juki Company LH-3128 | | |
| e | Single Needle Zig-Zag Machine | Juki Company LZ-2284 N | | |
| f | Five thread overlock Machine | Juki Mo-6716 S-DE4-404 | 1 | |
| g | Cutting Machine | Eastman | 1 | |

| Sl. No. | Details | Make & Specifications | No.s | Amount (Approximate) |
|---|---|---|---|---|
| h | Double needle lock stich split bar machine | Juki LH/3568 SF | | |
| i | Ironing Table with 2 Iron Boxes | Ramson company | | |
| j | Diesel Generating Set 20 KVA | Kirloskar or Other reputed company | 1 | |
| k | Electrical Wiring with materials | | | |
| | | *** Item No. 2 total restricted to Rs:** | | **11,98,000** |
| | **Office Equipments** | | | |
| 1 | Steel Almirah | | 2 | |
| 2 | Steel Racks (Slotted Angles) | | 4 | |
| 3 | Office Table | | 1 | |
| 4 | Office Chairs | S type | 8 | |
| 5 | Mechanic Table | | 1 | |
| 6 | Pattern making table | | 2 | |
| 7 | Water Purifer | Aqua Guard or Reputed company | 2 | |
| 8 | Black & White Board/Ceramic Magnetic Writing Green Board | 3" x 4" | 1 | |
| 9 | Pin up Board | 2" x 3" | 1 | |
| 10 | Computer & Printer with UPS | | 1 | |
| 11 | Overhead Project | | | |
| 12 | Library Books | As per requirement | | |
| | | ****Item No. 1 to 12 Total Rs.** | | **2,00,000** |
| | | **Grand Total Rs.** | | **20,00,000** |

* Speicilised machines, DG set & Electrical Wiring is restricted to Rs. 11,98,000/-.

** Furniture is restricted to Rs. 2,00,000/-.

**DR. SHAMLA IQBAL**
Director (SEP) &
E/o Deputy Secretary to Government,
Rural Development & Pan. Raj Department.

**Annexure – B**

| Sl. No. | Details | No.s | *Salary per month (Approximate Rs.) |
|---|---|---|---|
| **I** | **Teaching Staff** | | |
| 1 | Principal cum Senior instructor | 1 | 7,500 |
| 2 | Instructor | 1 | 5,000 |
| 3 | Machine Mechanic | 1 | 4,000 |
| **II** | **Administrative Staff** | | |
| 1 | Accountant | 1 | 3,000 |
| 2 | Data entry Operator | 1 | 2,500 |
| 3 | Peon/assistant | 1 | 2,000 |
| | **Total** | **6** | **24,000** |

*Recurring expenditure is to be met out of assistant from CAPART and honourorium received towards training fromn RDPR/Other Departments & Own Sources

**DR. SHAMLA IQBAL**
Director (SEP) &
E/o Deputy Secretary to Government,
Rural Development & Pan. Raj Department.

PR. 1530

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ–1

**ಸಂಖ್ಯೆ: ಸಿಆಸುಇ 5 ಹೆಚ್‌ಹೆಚ್‌ಎಲ್ 2008, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2008.**

ಸರ್ಕಾರವು 2009ನೇ ವರ್ಷಕ್ಕೆ ಮಂಜೂರು ಮಾಡಿರುವ ಸಾರ್ವಜನಿಕ ರಜಾ ದಿನಗಳ ಪಟ್ಟಿಯನ್ನು ಸಾರ್ವಜನಿಕ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

ಎಲ್ಲಾ ಎರಡನೇ ಶನಿವಾರಗಳು ಮತ್ತು ಭಾನುವಾರಗಳು ಹಾಗೂ ಈ ಕೆಳಕಂಡ ದಿನಗಳು.

| ಕ್ರ.ಸಂ. | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 1 | 8–1–2009 | ಗುರುವಾರ | ಮೊಹರಂ ಕಡೇ ದಿನ |
| 2 | 14–1–2009 | ಬುಧವಾರ | ಉತ್ತರಾಯಣ ಪುಣ್ಯಕಾಲ ಮಕರ ಸಂಕ್ರಾಂತಿ ಹಬ್ಬ |
| 3 | 20–1–2009 | ಸೋಮವಾರ | ಗಣರಾಜ್ಯೋತ್ಸವ |
| 4 | 23–2–2009 | ಸೋಮವಾರ | ಮಹಾ ಶಿವರಾತ್ರಿ |
| 5 | 10–3–2009 | ಮಂಗಳವಾರ | ಈದ್ ಮಿಲಾದ್ |
| 6 | 27–3–2009 | ಶುಕ್ರವಾರ | ಚಂದ್ರಮಾನ ಯುಗಾದಿ |
| 7 | 7–4–2009 | ಮಂಗಳವಾರ | ಮಹಾವೀರ ಜಯಂತಿ |
| 8 | 10–4–2009 | ಶುಕ್ರವಾರ | ಗುಡ್ ಫ್ರೈಡೆ |
| 9 | 14–4–2009 | ಮಂಗಳವಾರ | ಡಾ: ಅಂಬೇಡ್ಕರ್ ಜಯಂತಿ |
| 10 | 27–4–2009 | ಸೋಮವಾರ | ಬಸವೇಶ್ವರ ಜಯಂತಿ |
| 11 | 1–5–2009 | ಶುಕ್ರವಾರ | ಕಾರ್ಮಿಕ ದಿನಾಚರಣೆ |
| 12 | 15–8–2009 | ಶನಿವಾರ | ಸ್ವಾತಂತ್ರ್ಯ ದಿನಾಚರಣೆ |
| 13 | 18–9–2009 | ಶುಕ್ರವಾರ | ಮಹಾಲಯ ಅಮಾವಾಸ್ಯೆ |
| 14 | 21–9–2009 | ಸೋಮವಾರ | ಖುತುಬ್ ಎ ರಂಜಾನ್ |
| 15 | 28–9–2009 | ಸೋಮವಾರ | ವಿಜಯ ದಶಮಿ |
| 16 | 2–10–2009 | ಶುಕ್ರವಾರ | ಮಹಾತ್ಮ ಗಾಂಧಿ ಜಯಂತಿ |
| 17 | 17–10–2009 | ಶನಿವಾರ | ನರಕ ಚತುರ್ದಶಿ |
| 18 | 19–10–2009 | ಸೋಮವಾರ | ಬಲಿಪಾಡ್ಯಮಿ ದೀಪಾವಳಿ |
| 19 | 5–11–2009 | ಗುರುವಾರ | ಕನಕದಾಸ ಜಯಂತಿ |
| 20 | 28–11–2009 | ಶನಿವಾರ | ಬಕ್ರೀದ್ |
| 21 | 25–12–2009 | ಶುಕ್ರವಾರ | ಕ್ರಿಸ್‌ಮಸ್ |
| 22 | 28–12–2009 | ಸೋಮವಾರ | ಮೊಹರಂ ಕಡೇ ದಿನ |

**ಸೂಚನೆ:**

1) ಈ ರಜೆ ಪಟ್ಟಿಯು ಭಾನುವಾರಗಳಂದು ಬರುವ ವರಸಿದ್ಧಿ ವಿನಾಯಕ ವ್ರತ (23–8–2009), ಮಹಾನವಮಿ, ಆಯುಧಪೂಜೆ (27–9–2009) ಹಾಗೂ ಕನ್ನಡ ರಾಜ್ಯೋತ್ಸವ (1–11–2009) ರಜಾದಿನ–ಗಳನ್ನೊಳಗೊಂಡಿರುವುದಿಲ್ಲ.
2) ಸಾರ್ವತ್ರಿಕ ರಜಾ ದಿನಗಳಲ್ಲಿ ರಾಜ್ಯಾದ್ಯಂತ ಸರ್ಕಾರಿ ಕಚೇರಿಗಳು ಮುಚ್ಚಲ್ಪಡುತ್ತವೆ. ಕಛೇರಿಯ ಜರೂರು ಕೆಲಸವನ್ನು ವಿಲೇವಾರಿ ಮಾಡುವ ಬಗ್ಗೆ ಇಲಾಖಾ ಮುಖ್ಯಸ್ಥರುಗಳು ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

### ಅಧಿಸೂಚನೆ–1 ರ ಅನುಬಂಧ

**ಸಂಖ್ಯೆ: ಸಿಆಸುಇ 5 ಹೆಚ್‌ಹೆಚ್‌ಎಲ್ 2008, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2008.**

2009ನೇ ವರ್ಷಕ್ಕೆ ರಾಜ್ಯ ಸರ್ಕಾರಿ ನೌಕರರಿಗೆ ಇರುವ ಪರಿಮಿತ ರಜಾ ದಿನಗಳ ಪಟ್ಟಿ.

| ಕ್ರ.ಸಂ. | ದಿನಾಂಕ | ವಾರಗಳು | ಪರಿಮಿತ ರಜಾ ದಿನಗಳು |
|---|---|---|---|
| 1 | 1–1–2009 | ಗುರುವಾರ | ನೂತನ ವರ್ಷಾರಂಭ |
| 2 | 4–2–2009 | ಬುಧವಾರ | ಮಧ್ವನವಮಿ |
| 3 | 3–4–2009 | ಶುಕ್ರವಾರ | ಶ್ರೀರಾಮ ನವಮಿ |
| 4 | 29–4–2009 | ಬುಧವಾರ | ಶ್ರೀ ಶಂಕರಾಚಾರ್ಯ ಜಯಂತಿ/ ಶ್ರೀ ರಾಮಾನುಜಾಚಾರ್ಯ ಜಯಂತಿ |

| ಕ್ರ.ಸಂ. | ದಿನಾಂಕ | ವಾರಗಳು | ಪರಿಮಿತ ರಜಾ ದಿನಗಳು |
|---|---|---|---|
| 5 | 31–7–2009 | ಶುಕ್ರವಾರ | ವರಮಹಾಲಕ್ಷ್ಮಿ ವ್ರತ |
| 6 | 5–8–2009 | ಬುಧವಾರ | ಋಗ್ ಉಪಾಕರ್ಮ/ ಯಜುರ್ ಉಪಾಕರ್ಮ |
| 7 | 7–8–2009 | ಶುಕ್ರವಾರ | ಷಬ್–ಎ–ಬರಾತ್ |
| 8 | 13–8–2009 | ಗುರುವಾರ | ಶ್ರೀ ಕೃಷ್ಣ ಜನ್ಮಾಷ್ಟಮಿ |
| 9 | 2–9–2009 | ಬುಧವಾರ | ತಿರುಓಣಂ |
| 10 | 3–9–2009 | ಗುರುವಾರ | ಅನಂತ ಪದ್ಮನಾಭ ವ್ರತ |
| 11 | 17–9–2009 | ಗುರುವಾರ | ಷಬ್–ಎ–ಖಾದರ್ |
| 12 | 2–11–2009 | ಸೋಮವಾರ | ಗುರುನಾನಕ್ ಜಯಂತಿ |
| 13 | 3–12–2009 | ಗುರುವಾರ | ಹತ್ತರೀ ಹಬ್ಬ |
| 14 | 24–12–2009 | ಗುರುವಾರ | ಕ್ರಿಸ್‌ಮಸ್ ಈವ್ |

ಈ ರಜಾ ಪಟ್ಟಿಯು ಸಾರ್ವತ್ರಿಕ ರಜಾ ದಿನಗಳಂದು ಬರುವ ಹೋಳಿ ಹಬ್ಬ (10–3–2009), ಸೌರಮಾನ ಯುಗಾದಿ (14–4–2009), ಜಮತ್–ಉಲ್–ವಿದಾ (18–9–2009), ಎರಡನೇ ಶನಿವಾರದಂದು ಬರುವ ಪವಿತ್ರ ಶನಿವಾರ (11–4–2009), ಬುದ್ಧ ಪೂರ್ಣಿಮಾ (9–5–2009) ಹಾಗೂ ಭಾನುವಾರಗಳಂದು ಬರುವ ಸ್ವರ್ಣಗೌರಿ ವ್ರತ (23–8–2009) ಮತ್ತು ತುಲಾ ಸಂಕ್ರಮಣ (18–10–2009) ಗಳನ್ನೊಳಗೊಂಡಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಅಧಿಸೂಚನೆ–II**

**ಸಂಖ್ಯೆ: ಸಿಆಸುಇ 5 ಹೆಚ್‌ಹೆಚ್‌ಎಲ್ 2008, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2008.**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20:25:26:ಪಿಯುಬಿ 1, ದಿನಾಂಕ 15–6–1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್ಸ್ಟ್ರುಮೆಂಟ್ಸ್ ಆಕ್ಟ್ 1881ರ (1881ರ ಅಧಿನಿಯಮ ಸಂಖ್ಯೆ 26) 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ 2009ನೇ ವರ್ಷದಲ್ಲಿ ಈ ಕೆಳಗಿನ ದಿನಗಳನ್ನು ಕರ್ನಾಟಕ ರಾಜ್ಯದಾದ್ಯಂತ ಸಾರ್ವಜನಿಕ ರಜೆಗಳೆಂದು ಘೋಷಿಸಲಾಗಿದೆ.

ಎಲ್ಲಾ ಭಾನುವಾರಗಳು ಹಾಗೂ ಈ ಕೆಳಕಂಡ ದಿನಗಳು.

| ಕ್ರ.ಸಂ. | ದಿನಾಂಕ | ವಾರಗಳು | ಪರಿಮಿತ ರಜಾ ದಿನಗಳು |
|---|---|---|---|
| 1 | 8–1–2009 | ಗುರುವಾರ | ಮೊಹರಂ ಕಡೇ ದಿನ |
| 2 | 14–1–2009 | ಬುಧವಾರ | ಉತ್ತರಾಯಣ ಪುಣ್ಯಕಾಲ ಮಕರ ಸಂಕ್ರಾಂತಿ ಹಬ್ಬ |
| 3 | 26–1–2009 | ಸೋಮವಾರ | ಗಣರಾಜ್ಯೋತ್ಸವ |
| 4 | 23–2–2009 | ಸೋಮವಾರ | ಮಹಾ ಶಿವರಾತ್ರಿ |
| 5 | 10–3–2009 | ಮಂಗಳವಾರ | ಈದ್ ಮಿಲಾದ್ |
| 6 | 27–3–2009 | ಶುಕ್ರವಾರ | ಚಂದ್ರಮಾನ ಯುಗಾದಿ |
| 7 | 1–4–2009 | ಬುಧವಾರ | ವಾರ್ಷಿಕ ಬ್ಯಾಂಕ್ ಲೆಕ್ಕ ಪತ್ರ ಮುಕ್ತಾಯ ದಿನ |
| 8 | 7–4–2009 | ಮಂಗಳವಾರ | ಮಹಾವೀರ್ ಜಯಂತಿ |
| 9 | 10–4–2009 | ಶುಕ್ರವಾರ | ಗುಡ್ ಫ್ರೈಡೆ |
| 10 | 14–4–2009 | ಮಂಗಳವಾರ | ಡಾ: ಅಂಬೇಡ್ಕರ್ ಜಯಂತಿ |
| 11 | 27–4–2009 | ಸೋಮವಾರ | ಬಸವೇಶ್ವರ ಜಯಂತಿ |
| 12 | 1–5–2009 | ಶುಕ್ರವಾರ | ಕಾರ್ಮಿಕ ದಿನಾಚರಣೆ |
| 13 | 15–8–2009 | ಶನಿವಾರ | ಸ್ವಾತಂತ್ರ್ಯ ದಿನಾಚರಣೆ |
| 14 | 18–9–2009 | ಶುಕ್ರವಾರ | ಮಹಾಲಯ ಅಮಾವಾಸ್ಯೆ |
| 15 | 21–9–2009 | ಸೋಮವಾರ | ಖುತುಬ್ ಎ ರಂಜಾನ್ |
| 16 | 28–9–2009 | ಸೋಮವಾರ | ವಿಜಯ ದಶಮಿ |
| 17 | 30–9–2009 | ಬುಧವಾರ | ಅರ್ಧ ವಾರ್ಷಿಕ ಬ್ಯಾಂಕ್ ಲೆಕ್ಕ ಪತ್ರ ಮುಕ್ತಾಯ ದಿನ |

| ಕ್ರ.ಸಂ. | ದಿನಾಂಕ | ವಾರಗಳು | ಪರಿಮಿತ ರಜಾ ದಿನಗಳು |
|---|---|---|---|
| 18 | 2–10–2009 | ಶುಕ್ರವಾರ | ಮಹಾತ್ಮಾ ಗಾಂಧಿ ಜಯಂತಿ |
| 19 | 17–10–2009 | ಶನಿವಾರ | ನರಕ ಚತುರ್ದಶಿ |
| 20 | 19–10–2009 | ಸೋಮವಾರ | ಬಲಿಪಾಡ್ಯಮಿ ದೀಪಾವಳಿ |
| 21 | 5–11–2009 | ಗುರುವಾರ | ಕನಕದಾಸ ಜಯಂತಿ |
| 22 | 28–11–2009 | ಶನಿವಾರ | ಬಕ್ರೀದ್ |
| 23 | 25–12–2009 | ಶುಕ್ರವಾರ | ಕ್ರಿಸ್‌ಮಸ್ |
| 24 | 28–12–2009 | ಸೋಮವಾರ | ಮೊಹರಂ ಕಡೇ ದಿನ |

1) ಈ ರಜೆ ಪಟ್ಟಿಯು ಭಾನುವಾರಗಳಂದು ಬರುವ ವರಸಿದ್ಧಿ ವಿನಾಯಕ ವ್ರತ (23–8–2009), ಮಹಾನವಮಿ, ಆಯುಧ ಪೂಜೆ (27–9–2009) ಹಾಗೂ ಕನ್ನಡ ರಾಜ್ಯೋತ್ಸವ (1–11–2009) ರಜಾ ದಿನಗಳನ್ನೊಳಗೊಂಡಿರುವುದಿಲ್ಲ.

2) ಈ ರಜಾ ದಿನಗಳು ವಾಣಿಜ್ಯ ಬ್ಯಾಂಕ್ ಹಾಗೂ ಸಹಕಾರಿ ಬ್ಯಾಂಕ್‌ಗಳ ವಾರ್ಷಿಕ, ಅರ್ಧವಾರ್ಷಿಕ, ಲೆಕ್ಕ ಪತ್ರ ಮುಕ್ತಾಯಕ್ಕೆ ಮಾತ್ರ ಅನ್ವಯವಾಗುತ್ತದೆ. ಈ ದಿವಸಗಳಲ್ಲಿ ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾ ಕಛೇರಿಯು ಕಾರ್ಯ ನಿರ್ವಹಿಸುತ್ತದೆ. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಈ ಹಿಂದಿನ ವರ್ಷಗಳಲ್ಲಿದ್ದಂತೆ ಜೂನ್ 30 ಮತ್ತು ಡಿಸೆಂಬರ್ 31 ವಾರ್ಷಿಕ ಹಾಗೂ ಅರ್ಧವಾರ್ಷಿಕ ಲೆಕ್ಕಪತ್ರ ಮುಕ್ತಾಯದ ದಿನಗಳಾಗಿರುತ್ತದೆ. (ಈ ದಿನಗಳು ಭಾನುವಾರ ಅಥವಾ ಸಾರ್ವಜನಿಕ ರಜೆ ಎಂದು ಬಂದಲ್ಲಿ ಆ ತಿಂಗಳ ಕೊನೆಯ ಕೆಲಸದ ದಿನವು ಲೆಕ್ಕ ಪತ್ರ ಮುಕ್ತಾಯ ದಿನವಾಗಿರುತ್ತದೆ.)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ವಿ. ರಾಮು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**PERSONNEL AND ADMINISTRATIVE REFORMS SECRETARIAT**
**NOTIFICATION-I**
**No. DPAR 5 HHL 2008, Bangalore, Dated 2nd December 2008**

The following list of General Holidays sanctioned by the Government for the year 2009 is published for general information.

All Second Saturdays, Sundays and the following days.

| Sl.No. | Date | Days | Public Holidays |
|---|---|---|---|
| 1 | 8-1-2009 | Thursday | Last day of Moharam |
| 2 | 14-1-2009 | Wednesday | Uttarayana Punya Kala Makar Sankranti |
| 3 | 26-1-2009 | Monday | Republic Day |
| 4 | 23-2-2009 | Monday | Maha Shivaratri |
| 5 | 10-3-2009 | Tuesday | Id-Milad |
| 6 | 27-3-2009 | Friday | Chandramana Ugadi |
| 7 | 7-4-2009 | Thuesday | Mahaveer Jayanthi |
| 8 | 10-4-2009 | Friday | Good Friday |
| 9 | 14-4-2009 | Thesday | Dr. Ambedkar Jayanthi |
| 10 | 27-4-2009 | Monday | Basaveshwar Jayanthi |
| 11 | 1-5-2009 | Friday | May day |
| 12 | 15-8-2009 | Saturday | Independence Day |
| 13 | 18-9-2009 | Friday | Mahalaya Amavasye |
| 14 | 21-9-2009 | Monday | Kutub-E-Ramzan |
| 15 | 28-9-2009 | Monday | Vijayadashami |
| 16 | 2-10-2009 | Friday | Mahathma Gandhi Jayanthi |

| Sl.No. | Date | Days | Public Holidays |
|---|---|---|---|
| 17 | 17-10-2009 | Saturday | Naraka Chaturdashi |
| 18 | 19-10-2009 | Monday | Balipadyami Deepawali |
| 19 | 5-11-2009 | Thursday | Kanakadas Jayanthi |
| 20 | 28-11-2009 | Saturday | Bakrid |
| 21 | 25-12-2009 | Friday | Christmas |
| 22 | 28-12-2009 | Monday | Last day of Moharam |

**Note:**

1) This lis does not include Varasiddhi Vinayaka Vrata (23-8-2009), Mahanavami, Ayudha Pooja (27-9-2009) and Kannada Rajyotsava (1-11-2009) which falls on Sundays.
2) Government offices will be closed through out the State on General Holidays. However Heads of Department should make necessary arrangements for the discharge of urgent work.
3) If any of the Muslim Holidays notified above does not fall on the date notified Muslim in Government Service may be granted Holiday on the date of observance in lieu of the holidays already notified.
4) Local holiday is declared for Kodagu District only on account of Huthri Festival on 3-12-2009 (Thursday) and Tula Sankramana 18-10-2009 which falls on Sunday, is not included.
5) Separate list of Holidays will be published by the Commissioner of Public Instructions, Bangalore for the Education Department.
6) In addition to the General holidays the State Government employees may utilize any of the Restricted Holidays not exceeding two days during the year 2009 with previous permission from the authority who is authorised to sanction casual leave.

By order and in the name of the Governor of Karnataka,

**K.V. RAMA**

Under Secretary to Government,
Dept. of Personnel & Administrative Reforms
(State Protocol-1)

**ANNEXURE TO NOTIFICATION-I**

**No. DPAR 5 HHL 2008, Bangalore, Dated 2nd December 2008**

List of Restricted Holidays for the State Government Employees for the year 2009.

| Sl.No. | Date | Days | Restricted Holidays |
|---|---|---|---|
| 1 | 1-1-2009 | Thursday | New Year Day |
| 2 | 4-2-2009 | Wednesday | Madhwa Navami |
| 3 | 3-4-2009 | Friday | Shri Rama Navami |
| 4 | 29-4-2009 | Wednesday | Shri Ramanujacharya Jayanti/<br>Shri Shankaracharya Jayanti |
| 5 | 31-7-2009 | Friday | Varamahalakshmi Vrata |
| 6 | 5-8-2009 | Wednesday | Rug Upakarma/Yajur Upakarma |
| 7 | 7-8-2009 | Friday | Shab-e-barat |
| 8 | 13-8-2009 | Thursday | Shri Krishna Janmashtami |
| 9 | 2-9-2009 | Wednesday | Tiru Onam |
| 10 | 3-9-2009 | Thursday | Ananth Padmanabha Vrata |
| 11 | 17-9-2009 | Thursday | Shab-E.Khader |
| 12 | 2-11-2009 | Monday | Gurunanak Jayanthi |
| 13 | 3-12-2009 | Thursday | Huttari Festival |
| 14 | 24-12-2009 | Thursday | Chrismas Eve. |

This list does not include Holi Festival (10-3-2009), Souraman Ugadi (14-4-2009), Jamat-Ul-Vida (18-9-2009) which falls on General Holidays and Holy Saturday (11-4-2009, Buddha Poornima (9-5-2009) which falls on Second Saturdays and Swarna Gowri Vrata (23-8-2009) and Tula Sankramana (18-10-2009) which falls on Sundays.

By order and in the name of the Governor of Karnataka,

**K.V. RAMA**

Under Secretary to Government,

Dept. of Personnel & Administrative Reforms

(State Protocol-1)

**NOTIFICATION-II**

**No. DPAR 5 HHL 2008, Bangalore, Dated 2nd December 2008**

Under the explanation of Section 25 of the Negotiable Instruments Act 1881 (Act No. XXVI of 1881) read with Notification No. 20/25/26/Pub-1 dt: 15-6-1957 of the Government of India Ministry of Home Affairs the following shall be Public Holidays throughout the State of Karnataka during the year 2009.

All Sundays and the following days.

| Sl.No. | Date | Days | Public Holidays |
|---|---|---|---|
| 1 | 8-1-2009 | Thursday | Last day of Moharam |
| 2 | 14-1-2009 | Wednesday | Uttarayana Punya Kala Makar Sankranti |
| 3 | 26-1-2009 | Monday | Republic Day |
| 4 | 23-2-2009 | Monday | Maha Shivaratri |
| 5 | 10-3-2009 | Thuesday | Id-Milad |
| 6 | 27-3-2009 | Friday | Chandrmana Ugadi |
| 7 | 1-4-2009 | Wednesday | Yearly closing of Bank Accounts |
| 8 | 7-4-2009 | Tuesday | Mahaveer Jayanthi |
| 9 | 10-4-2009 | Friday | Good Friday |
| 10 | 14-4-2009 | Tuesday | Dr. Ambedkar Jayanthi |
| 11 | 27-4-2009 | Monday | Basaveshwar Jayanthi |
| 12 | 1-5-2009 | Friday | May Day |
| 13 | 15-8-2009 | Saturday | Independence Day |
| 14 | 18-9-2009 | Friday | Mahalaya Amavasye |
| 15 | 21-9-2009 | Monday | Kutub-E-Ramzan |
| 16 | 28-9-2009 | Monday | Vijayadashami |
| 17 | 30-9-2009 | Wednesday | Half-yearly closing of Bank Accounts |
| 18 | 2-10-2009 | Friday | Mahathma Gandhi Jayanthi |
| 19 | 17-10-2009 | Saturday | Naraka Chathurdashi |
| 20 | 19-10-2009 | Monday | Balipadyami Deepawali |
| 21 | 5-11-2009 | Thursday | Kanakadas jayanthi |
| 22 | 28-11-2009 | Saturday | Bakrid |
| 23 | 25-12-2009 | Friday | Christmas |
| 24 | 28-12-2009 | Monday | Last day of Moharam |

1) This list does not include Varasiddhi Vinayak Vrata (23-8-2009), Mahanavami, Ayudha Pooja (27-9-2009) and Kannada Rajyotsava (1-11-2009) which fals on Sundays.

2) These holidays are declared for closing of Accounts of Commercial Banks and Co-operative Banks. The Reserve Bank of India will be functioning on these days. There is however no change in the day of closing of Accounts of Reserve Bank of India which continues to be 30th

June and 31st December (However if these days are Sundays or General Holidays, the last working day of the month will be the day for Closing of Accounts).

By order and in the name of the Governor of Karnataka,

P.R. 1648

**K.V. RAMA**

Under Secretary to Government,
Dept. of Personnel & Administrative Reforms
(State Protocol-1)

**RURAL DEVELOPMENT AND PANCHAYAT RAJ SECRETARIAT**

**Sub :** Constitution of working group at State level for operationalisation of MIS.

**Read :** Correspondence ending with D.O. No.J-11014/1/2007-NREGA dated 21st October from Secretary, GOI, MoRD, New Delhi.

**Preamble:**

Government of India vide above reference has informed the State Government to set up a State Level Working Group with various members as suggested in the letter to coordinate the various activities required to be undertaken for operationalisation of MIS after a decision taken in the meeting held on 29-9-08 with Secretary, Department of Information & Technology, GOI & other senior officers of DIT and NIC. It was also informed that the working group shall review and monitor the vaious processes of the MIS that would arise out of the implementation of the scheme. In view of the above, it is considered necessary to constitute the working group at State level to monitor the various processes of MIS. Hence the followings Order.

**Government Order No. RDP 02 NRE 2008, Bangalore, Dated 18th November 2008**

In the circumstances explained above, State Level Working Group is constituted with the following members to coordinate the various activities required to be under taken for operationalisation of MIS.

| | | |
|---|---|---|
| 1 | Secretary to Government (PR), RD & PR Dept. | Chairman |
| 2 | Director, Information & Technology or his nominee | Member |
| 3 | Director, National Informatics Centre or his nominee | Member |
| 4 | Director, NREGS | Member Secretary |

The above working group will review and monitor the following aspects of the MIS.

a. Data entry of records, muster rolls, job cards, works, accounts, social audit grievances and complaints of their up-loading.
b. Training of blocks and panchayat functionaries.
c. Establishment and management of LAN at the State and District levels.
d. Establishment and management of NREGA data centre at the State level.
e. Operationalisation of MIS in the blocks.
f. Deployment of IT professionals in the field officers.
g. Outsourcing of activities.

The working group shall meet as frequently as possible to review the operationalisation of MIS. Working group so constituted shall come into force with immediate effect.

By order and in the name of the Governor of Karnataka,

PR. 1597

**A.S. SRIKANTH**

Secretary to Government,
Rural Development & Panchayat Raj Department.

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜುಪಟ್ಟಿಗಳನ್ನು ಪರಿಶೀಲಿಸಲು ರಚಿಸಲಾಗಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಗೆ ಹೆಚ್ಚುವರಿ ಸದಸ್ಯರನ್ನು ನೇಮಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 166 ಮಸಾವಿ 2007, ದಿನಾಂಕ 21-1-2008.

2. ಸರ್ಕಾರದ ಆದೇಶದ ಸಂ: ಸನೀಇ 116 ಮಸಾವಿ 2008, ದಿ: 29–7–2008.
3. ದಿನಾಂಕ 27–3–2008ರಂದು ಕೊನೆಗೊಂಡ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ತಾಸ–1/ತಾ.ಮೌ.ನಿಸ/07–08, 1858.

**ಪ್ರಸ್ತಾವನೆ :**

ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಪುನರ್‌ರಚಿಸಿ ಆದೇಶ ಹೊರಡಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಸಮಿತಿಗೆ ಡೈರೆಕ್ಟರ್ (ಎಂ & ಇ) ಕೇಂದ್ರ ಜಲ ಆಯೋಗ ಬೆಂಗಳೂರು ಇವರನ್ನು ಅಧಿಕಾರಿ ಸದಸ್ಯರನ್ನಾಗಿ ನೇಮಿಸಲಾಗಿದೆ. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿತ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಗೆ ತಾಂತ್ರಿಕ ನಿಪುಣತೆಯನ್ನು ಹೊಂದಿರುವ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲು ಕೋರಿರುತ್ತಾರೆ.

1) ಶ್ರೀ ಎಸ್.ಎನ್. ಪ್ರಸಾದ್, ಪ್ರಧಾನ ಇಂಜಿನಿಯರ್ (ನಿವೃತ್ತ)
2) ಶ್ರೀ ವೈ. ಲಿಂಗರಾಜು, ನಿವೃತ್ತ ಭೂವಿಜ್ಞಾನಿ
3) ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್

ಈ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 46 ಮಸಾವಿ 2008, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ 21–1–2008 ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಪರಿಶೀಲಿಸುವ ಸಲುವಾಗಿ ರಚಿಸಲಾದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಗೆ ಈ ಕೆಳಕಂಡವರನ್ನು ಹೆಚ್ಚುವರಿಯಾಗಿ ಅಧಿಕಾರೇತರ ಸದಸ್ಯರನ್ನಾಗಿ ನೇಮಕ ಮಾಡಿದೆ.

1) ಶ್ರೀ ಎನ್.ಎನ್. ಪ್ರಸಾದ್, ಪ್ರಧಾನ ಇಂಜಿನಿಯರ್ (ನಿವೃತ್ತ)
2) ಶ್ರೀ ಪಿ.ವಿ. ಜತ್ತಿ, ಮುಖ್ಯ ಇಂಜಿನಿಯರ್ (ನಿವೃತ್ತ)
3) ಶ್ರೀ ಪಿ.ಎ. ರೆಡ್ಡಿ, ಮುಖ್ಯ ಇಂಜಿನಿಯರ್ (ನಿವೃತ್ತ)

ದಿನಾಂಕ 21–1–2008ರ ಆದೇಶದಲ್ಲಿನ ಇನ್ನಿತರ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1637

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಎಂ.ಬಿ. ಬಾಲಸುಂದರಂ, ನೋಟರಿ, ಮಂಡ್ಯ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:** 5. ಸರ್ಕಾರದ ಪತ್ರ ಸಂಖ್ಯೆ: ಲಾ 23 ಎಲ್‌ಸಿಎಲ್ 08, ದಿನಾಂಕ 29–3–08 ಮತ್ತು 6–9–08.
6. ಪತ್ರ ಸಂಖ್ಯೆ ಲಾ 40 ಎಲ್‌ಸಿಎಲ್ 07, ದಿನಾಂಕ 16–5–08 ಹಾಗೂ 9–6–08.
7. ಎಂಐಎಸ್ ರವಾನೆ ಸಂಖ್ಯೆ 1778/2008, ದಿನಾಂಕ 24–7–08 ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮಂಡ್ಯರವರಿಂದ
8. ನೋಟರಿಯವರ ಮನವಿ ದಿನಾಂಕ 23–7–08 ಮತ್ತು 15–9–08.

**ಪ್ರಸ್ತಾವನೆ :**

ಶ್ರೀ ಎಂ.ಬಿ. ಬಾಲಸುಂದರಂ, ನೋಟರಿ, ಮಂಡ್ಯ ಇವರು ನೋಟರಿ ನಿಯಮ 14 ರನ್ವಯ 2005ನೇ ಸಾಲಿನಲ್ಲಿ ಶೂನ್ಯ ಮಾಹಿತಿ ಸಲ್ಲಿಸಿದ್ದು, 2006 ಹಾಗೂ 2007ನೇ ಸಾಲುಗಳಲ್ಲಿ ಯಾವುದೇ ವರದಿಯನ್ನು ಸಲ್ಲಿಸಿರುವುದಿಲ್ಲ ಮತ್ತು ನಿಯಮ 11ರನ್ವಯ ಕರ್ತವ್ಯದ ಬಗ್ಗೆ ರಿಜಿಸ್ಟರು ಹಾಗೂ ಪೂರಕ ದಾಖಲೆಗಳನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮಂಡ್ಯ ಇವರಿಗೆ ತಪಾಸಣೆಗೆ ಒಳಪಡಿಸಿ ತಪಾಸಿಸಿಕೊಂಡಿಲ್ಲದೇ ಇರುವುದನ್ನು ಗಮನಿಸಿ ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಪತ್ರಗಳಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಂದ ನೋಟರಿ ರಿಜಿಸ್ಟರ್‌ಗಳನ್ನು ತಪಾಸಿಸಿಕೊಳ್ಳುವಂತೆ ವಿವರಣೆ ಏನಾದರೂ ಇದ್ದಲ್ಲಿ 15 ದಿನಗಳಲ್ಲಿ ಸಲ್ಲಿಸುವಂತೆ ನೋಟರಿಯವರಿಗೆ ಸೂಚಿಸಲಾಗಿತ್ತು ಮತ್ತು ಸಾಕಷ್ಟು ಕಾಲಾವಕಾಶವನ್ನು ನೀಡಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ 24–7–08ರ ಪತ್ರದಲ್ಲಿ ಸದರಿ ನೋಟರಿಯವರಿಗೆ ದಿನಾಂಕ 26–6–08ರಂದು ತಮ್ಮ ಕಛೇರಿಯ ಬೇಲಿಫ್ ಮುಖಾಂತರ ಜಾರಿ ಮಾಡಲಾದ

ನೋಟೀಸನ್ನು ಖುದ್ದು ಸ್ವೀಕರಿಸಿದ್ದರೂ 2006 ಮತ್ತು 2007ನೇ ಸಾಲಿನ ನೋಟರಿ ರಿಟರ್ನ್ಸ್ ಹಾಗೂ ರಿಜಿಸ್ಟರ್‌ಗಳನ್ನು ತಪಾಸಣೆಗೆ ಹಾಜರಿಪಡಿಸಿರುವುದಿಲ್ಲವೆಂದೂ ತಿಳಿಸಿ ನೋಟರಿ ಅಧಿನಿಯಮ 10(ಸಿ)ರನ್ವಯ ಕ್ರಮ ಜರುಗಿಸಬಹುದೆಂದು ವರದಿ ನೀಡಿರುತ್ತಾರೆ. ಮತ್ತು ನೋಟರಿಯವರು ದಿನಾಂಕ 23–7–08 ಪತ್ರದಲ್ಲಿ ಪ್ರಮಾಣ ಪತ್ರದ ಅವಧಿ ದಿನಾಂಕ 2–7–06ಕ್ಕೆ ಅಂತ್ಯಗೊಂಡಿದ್ದು ತದನಂತರ ಯಾವುದೇ ಕರ್ತವ್ಯ ನಿರ್ವಹಿಸಿಲ್ಲವೆಂದು ನೀಡಿದ ವಿವರಣೆ ಹಾಗೂ ಮೇಲ್ಕಂಡ ಮಾಹಿತಿಯ ಹಿನ್ನೆಲೆಯಲ್ಲಿ ನೋಟರಿಯವರಿಂದ ಉಲ್ಲೇಖಿತ (1)ರ ದಿನಾಂಕ 6–9–08ರ ಪತ್ರದಲ್ಲಿ ನೋಟರಿಗಳ ಅಧಿನಿಯಮ, ನಿಯಮಗಳನ್ವಯ ಕ್ರಮವಹಿಸುವ ಮುನ್ನ ಹೇಳಿಕೆ ಕೋರಲಾಗಿತ್ತು. ಸದರಿ ನೋಟರಿಯವರು ಮೇಲೆ (4)ರಲ್ಲಿ ಓದಲಾದ ದಿನಾಂಕ 15–9–08ರ ಪತ್ರದಲ್ಲಿ ಅನಾರೋಗ್ಯದ ನಿಮಿತ್ತ ಹಾಗೂ ಮಗಳ ಮದುವೆ ಬಂದೊದಗಿ ಅದರ ಬಗ್ಗೆ ಗಮನ ಹರಿಸಿದ್ದರಿಂದ ಮತ್ತು 2005, 2006 ಮತ್ತು 2007ನೇ ಸಾಲಿನಲ್ಲಿ ಕರ್ತವ್ಯವನ್ನೇ ನಿರ್ವಹಿಸದೆ ಯಾವ ವರದಿ ಸಲ್ಲಿಸುವುದೆಂದು ವಿಫಲವಾಗಿರುವುದಾಗಿ ತಿಳಿಸಿ, ಕರ್ತವ್ಯಲೋಪ ಕ್ಷಮಿಸಿ ನೋಟರಿ ನವೀಕರಣಕ್ಕೆ ಮತ್ತೊಂದು ಅವಕಾಶ ನೀಡುವಂತೆ ಕೋರಿದ್ದಾರೆ.

ವೈಯಕ್ತಿಕ ಕಾರಣಗಳಿಂದ ಸದರಿಯವರು 3 ವರ್ಷಗಳಿಂದ ನೋಟರಿ ಕರ್ತವ್ಯ ನಿರ್ವಹಿಸದೇ ಅದನ್ನು ಸರ್ಕಾರದ ಗಮನಕ್ಕೂ ತರದೇ ಇರುವುದು ಮತ್ತು ಇವರಿಂದ ಸಾರ್ವಜನಿಕರು ನೋಟರಿ ಸೌಲಭ್ಯ/ಸೇವೆಯಿಂದ ವಂಚಿತರಾಗಿರುವುದು ಸ್ಪಷ್ಟವಾಗಿದೆ. ಆದ್ದರಿಂದ ಶ್ರೀಯುತರು 3 ವರ್ಷಗಳಿಂದ ಕರ್ತವ್ಯ ನಿರ್ವಹಿಸದಿರುವುದು ಮತ್ತು ಪ್ರಮಾಣ ಪತ್ರದ ಅವಧಿ ಮುಗಿದ ನಂತರ ನವೀಕರಣಕ್ಕೆ ಯಾವುದೇ ಮನವಿ ಸಲ್ಲಿಸದಿರುವ ಕರ್ತವ್ಯಲೋಪವನ್ನು ಗಂಭೀರವಾಗಿ ಪರಿಗಣಿಸಿ ಈ ಆದೇಶ ಮಾಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2008.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಂ.ಬಿ. ಬಾಲಸುಂದರಂ, ನೋಟರಿ ಮಂಡ್ಯ ಇವರ ಹೆಸರನ್ನು ನೋಟರಿ ಕಾಯ್ದೆ ಕಲಂ 10(ಬಿ)(ಸಿ) ಮತ್ತು ನಿಯಮ 13(12)(ಬಿ)(1) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1638

**ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ.ಎಸ್. ಕೃಷ್ಣಮೂರ್ತಿ, ಪಿ.ಸಿ.–2689, ವೈಯ್ಯಾಲಿಕಾವಲ್ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪಶ್ಚಿಮ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: 15/ಡಿಇ/ಆರ್–6/ಡಿಸಿಪಿ/ಪ/06, ದಿನಾಂಕ 10/11–10–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ: 02/ಅಪೀಲು/2006, ದಿನಾಂಕ 14–6–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 7–3–2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಅಪೀಲು(2)5/2008–09, ದಿನಾಂಕ 2–8–2008.

**ಪ್ರಸ್ತಾವನೆ :**

ಶ್ರೀ ಕೆ.ಎಸ್. ಕೃಷ್ಣಮೂರ್ತಿ, ಪಿ.ಸಿ.–2689, ವೈಯಾಲಿಕಾವಲ್ ಪೊಲೀಸ್ ಠಾಣೆ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಕೆ.ಎಸ್. ಕೃಷ್ಣಮೂರ್ತಿ, ಪಿ.ಸಿ.–2689, ಕಲಾಸಿಪಾಳ್ಯ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ. ನೀವು ದಿನಾಂಕ 5–3–2006 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತೀರಿ. ಈ ಬಗ್ಗೆ ಪಿ.ಐ. ರವರು ದಿ: 25–3–2006ರಲ್ಲಿ ಜ್ಞಾಪನ ನೀಡಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಸೂಚಿಸಿದ್ದರೂ ಸಹ ನೀವು ಈವರೆವಿಗೂ ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಿ ಮುಂದುವರಿಸಿರುತ್ತೀರಿ. ಈ

ಕಛೇರಿಯಿಂದ ದಿ: 6–4–2006 ರಂದು ಡೆಸರಟರ್ ಆದೇಶ ಹೊರಡಿಸಿದ್ದು, ಆದೇಶದಲ್ಲಿ 1 ತಿಂಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿದ್ದರೂ ಸಹ ನೀವು ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಿ ಮುಂದುವರೆಸಿರುತ್ತೀರಿ. ಅಲ್ಲದೇ ನಿಮ್ಮ ಸೇವಾಪುಸ್ತಕವನ್ನು ಪರಿಶೀಲಿಸಲಾಗಿ ಪದೇ ಪದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುವ ಚಟವನ್ನು ಬೆಳೆಸಿಕೊಂಡಿರುವುದು ಸ್ಪಷ್ಟವಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪಶ್ಚಿಮ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 10/11–10–2006ರ ಆದೇಶದಲ್ಲಿ "ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಹಾಗೂ ಗೈರುಹಾಜರಾದ ದಿ: 5–3–06 ರಿಂದ 23–4–2006ರ ವರೆಗಿನ ಅವಧಿಯನ್ನು ಸಂಬಳರಹಿತ ರಜೆಯನ್ನಾಗಿ ಪರಿಗಣಿಸುವ" ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರು ಶಿಸ್ತು ಪ್ರಾಧಿಕಾರದ ಆದೇಸವನ್ನು ಭಾಗಶಃ ಮಾರ್ಪಡಿಸಿ, ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಮುಂದೂಡಿರುವ ಶಿಕ್ಷೆಯನ್ನು ಎತ್ತಿಹಿಡಿದು ಗೈರುಹಾಜರಾದ ಅವಧಿಯನ್ನು ಅವರ ಲೆಕ್ಕದಲ್ಲಿರುವ ರಜೆಯೆಂದು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 14–6–2007ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅನಾರೋಗ್ಯದ ನಿಮಿತ್ತ ರಜೆ ಹಾಕಿರುವುದಾಗಿ ಮೊದಲೇ ಠಾಣೆಗೆ ಮಾಹಿತಿ ನೀಡಿ ಎಂ.ಎಚ್.ಎಸ್. ಪಡೆಯದೇ ಹೋಗಿರುವುದು ಹಾಗೂ ಪದೇ ಪದೇ ಕರ್ತವ್ಯಕ್ಕೆ ಗೈರುಹಾಜರಾಗುವ ಸ್ವಭಾವದವರಾಗಿರುವುದು ದೃಢಪಟ್ಟಿರುತ್ತದೆ. ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಪರಿಷ್ಕರಣ ಮೇಲ್ಮನವಿದಾರರಿಗೆ ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 279 ಪೊಸಿಅ 2008, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎಸ್. ಕೃಷ್ಣಮೂರ್ತಿ, ಪಿ.ಸಿ. 2689, ವೈಯಾಲಿಕಾವಲ್ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1636

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಅಪಜೀ 137 ಎಫ್‌ಎಪಿ 2008, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2008.**

ಸರ್ಕಾರಿ ಆದೇಶ ಸಂ: ಅಪಜೀ 137 ಎಫ್‌ಎಪಿ 2008, ದಿನಾಂಕ 4–11–2008ರ ಆದೇಶ ಭಾಗದ ಕಂಡಿಕೆ 1(3)ರ ನಂತರ ಈ ಕೆಳಕಂಡಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"ಈ ವೆಚ್ಚವನ್ನು ಯೋಜನಾ ಲೆಕ್ಕಶೀರ್ಷಿಕೆ 2406–01–101–2–24–Cultivation of Sandalwood Trces-059-Other Expenses ರಡಿ ಭರಿಸತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1620

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ